# ...ಲ್ಲಿ ಪ್ರೀತಿಯೋ ಅಲ್ಲಿ ದೇವರು

( ಏಕಾಂಕ ಸರಸ ಸಂಗೀತ ನಾಟಕ )



ರಚಯಿತರು:

**ಶ್ರೀ. ಕೆ. ಎಸ್. ಪದ್ಮನಾಭಾಚಾರ್ಯ**



ರಚಯಿತರು:
ಶ್ರೀ ಕೆ. ಎಸ್. ಪದ್ಮನಾಭ ಆಚಾರ್ಯ.



ಸಂಗೀತದ ಸ್ವರ ಸಂಯೋಜಕಿ:
ಶ್ರೀಮತಿ ರಮಾದೇವಿ ಆಚಾರ್ಯ.

# ಎಲ್ಲಿ ಪ್ರೀತಿಯೋ ಅಲ್ಲಿ ದೇವರು

(ಏಕಾಂಕ ಸರಸ ಸಂಗೀತ ನಾಟಕ)

11. 9. 1958


ರಚಯಿತರು:

**ಶ್ರೀ ಕೆ. ಎಸ್. ಪದ್ಮನಾಭಾಚಾರ್ಯರು.**

'ಕನ್ನಡ-ಹಿಂದೀ ಪಂಡಿತರು' ಮತ್ತು 'ಸಂಗೀತಾಧ್ಯಾಪಕರು'

'ರೋಸ-ಮಿಸ್ತಿಕ' ಹೈಸ್ಕೂಲ್ ಮತ್ತು ಸೆಕೆಂಡರೀ ಬೇಸಿಕ್ ಟ್ರೈನಿಂಗ್ ಸ್ಕೂಲ್, ಗುರುಪುರ.

ಅಂಚೆ ಮನೆ: ಕಿನ್ನಿಕಂಬಳ— ದ. ಕ. ಜಿಲ್ಲೆ.



ಪ್ರಕಾಶಕರು:

ಬಾಲ ಸಾಹಿತ್ಯ ಮಂಡಲ, ಮಂಗಳೂರು, ದ. ಕ.

**1958.**

ಬೆಲೆ: ಎಂಟಾಣೆ. 50 ನಯಾಪೈಸೆ.

# ಮುನ್ನುಡಿ

ಈ ನಾಟಕ ಕರ್ತೃಗಳಾದ ಶ್ರೀ ಪದ್ಮನಾಭಾಚಾರ್ಯರು, ಈ ನಾಟಕಕ್ಕೆ ನನ್ನ ಮುನ್ನುಡಿಯನ್ನು ಬಯಸಿರುವುದು, ಅವರಿಗೆ ನನ್ನ ಮೇಲಿರುವ ಪ್ರೇಮಾದರಗಳೇ ಕಾರಣ ಎಂದು ಭಾವಿಸಿ, ಅಲ್ಲಗಳೆಯದಾದೆ.

ಅವರು ತಮ್ಮ ಬಾಲ್ಯವನ್ನು ನಾಟಕ ಸಂಸ್ಥೆಗಳಲ್ಲೇ ಕಳೆದು, ನಾಟಕದ ವಿಧಾನವನ್ನು ಚೆನ್ನಾಗಿ ಅರಗಿಸಿಕೊಂಡವರು ಎಂಬುದನ್ನು ಅವರ ಉತ್ತಮ ಕೃತಿಗಳಾದ 'ಮಹಾಕವಿ ಭಾರವಿ,' 'ಚಂದ್ರಹಾಸ' ನಾಟಕಗಳ ರಂಗ ಭೂಮಿಯ ಯಶಸ್ವೀ ಪ್ರಯೋಗಗಳನ್ನು ಕಂಡು, ಮೊದಲೇ ತಿಳಿದುಕೊಂಡಿದ್ದೇನೆ. ಪ್ರತಿ ದೃಶ್ಯಗಳನ್ನೂ, ಒಂದು ತರಹದ ವಿಶೇಷ ವೈಶಿಷ್ಟ್ಯದಿಂದ ಸಜ್ಜುಗೊಳಿಸುವ ಚೈತನ್ಯ, ಪ್ರತಿಭೆ ಅವರಲ್ಲಿದೆ. ಸ್ವಯಂ ಸಂಗೀತ ಬಲ್ಲವರೂ, ಸಾಹಿತಿಗಳೂ ಆಗಿರುವ ಅವರು, ಉಚಿತ ರೀತಿಯ ಹಾಡುಗಳನ್ನು ಅದರ ಜತೆಗೂಡಿಸುವುದರಲ್ಲೂ, ಯಶಸ್ವಿಗಳಾಗಿರುತ್ತಾರೆ. ಅಲ್ಲಲ್ಲಿ ನೃತ್ಯಗಳ ಭಂಗಿಗಳೊಡನೆ, ರಾಗಭಾವಗಳು ಮಿಳನಗೊಳ್ಳುತ್ತವೆ. ಮಾತುಗಳಲ್ಲಿ ಓಜವಿದೆ. ಓಟವಿದೆ. ಎಲ್ಲೂ ರಸಹೀನವಾಗಲು ಎಡೆ ಕೊಡುವುದಿಲ್ಲ. ಇಂತಹ ಅವರ ರಚನಾ ಕೌಶಲ್ಯವನ್ನು ಈ ಏಕಾಂಕದಲ್ಲೂ ನಾನು ಕಾಣುತ್ತಿದ್ದೇನೆ.

ಕ್ರೈಸ್ತ ಪಂಥದ ಒಂದು ಕಥಾನೀತಿಯನ್ನು ಸಾಮಾಜಿಕದ ಕೈಪಿಡಿಯನ್ನಾಗಿಸುವ ರೀತಿಯಿಂದ, ಒಂದೇ ದೃಶ್ಯದಲ್ಲಿ ಬಹು ಯುಕ್ತಿಯುಕ್ತವಾಗಿ, ಹಿತ–ಮಿತವಾಗಿ, ಪಾತ್ರರಚನೆ, ಮಾತಿನ ಮಾಧುರ್ಯ, ಸಂಗೀತದ ಸೊಗಸು ಮುಂತಾದವುಗಳನ್ನು ಸಂಯೋಜಿಸಿ, ಅಭಿನಯಿಸಲು ಅನುಕೂಲವಾಗುವಂತೆ ಅಳವಡಿಸಿಕೊಂಡು, ತನ್ನ ಕೃತಿ ಚಮತ್ಕೃತಿಯನ್ನು ಇದರಲ್ಲಿ ತೋರಿಸಿದ್ದಾರೆ.

ದೀನರ ಸೇವೆಯಲ್ಲೇ ದೇವರ ಒಲವು ಇದೆ. 'ದೇವರ ಒಲವನ್ನು ಪಡೆಯುವುದಕ್ಕೆ ಜಾತಿ ಮುಖ್ಯವಾಗಿರದೆ, ವ್ಯಕ್ತಿಯ ನೀತಿಯೇ ಮುಖ್ಯವಾಗಿರುತ್ತದೆ' ಎಂಬ ಉಚ್ಚತತ್ವ, ಈ ನಾಟಕದಲ್ಲಿ 'ಮಾರ್ಟಿನ್' ಎನ್ನುವ ಸಮಗಾರನ ಪಾತ್ರದಿಂದ ವ್ಯಕ್ತವಾಗುತ್ತದೆ. 'ದಯೆ ಇರುವಲ್ಲಿ, ಕ್ಷಮೆ ಇರುವಲ್ಲಿ ದೇವರು ಇರುತ್ತಾರೆ' ಎಂಬುದು, ಒಂದು ಸಾಮಾಜಿಕ ತತ್ವ. 'ದೇವರ ವಿಷಯದ ಈ ಜ್ಞಾನವೇ ಮಾನವನ ಮುಕ್ತಿ' ಎಂಬ ಹೊಸ ತತ್ವ

ಈ ಆಧುನಿಕ ಜಗತ್ತಿಗೆ, ಹಿತವಾಗಿ ಹೊಂದಣಿಕೆಯಾಗಿ ತೋರುವಂತಹು ದಾದ್ದರಿಂದ, ಅದನ್ನೇ ಈ ನಾಟಕದಲ್ಲಿ ಶ್ರೀ ಆಚಾರ್ಯರು ವ್ಯಕ್ತಪಡಿಸಿ, ಯಶಸ್ವಿಯಾಗಿದ್ದಾರೆ. ಶ್ರೀ ಆಚಾರ್ಯರು ಬಹುಮುಖದ ಪ್ರತಿಭೆಯ ವ್ಯಕ್ತಿ 'ಇವರ ಬಹುಮುಖದ ಸುಂದರ ಕೃತಿಗಳು ಸಮಾಜಕ್ಕೆ ಕಾಣಿಕೆಯಾಗಿ ಮತ್ತೂ ಮತ್ತೂ ಬರುವಂತೆ, ಭಗವಂತನು ಅವರನ್ನು ಕರುಣಿಸಲಿ' ಎಂದೂ, 'ಜನತೆ ಈ ಚಿಕ್ಕ ನಾಟಕವನ್ನು ಚೆನ್ನಾಗಿ ಬಳಸಿಕೊಂಡು, ಈ ಕೃತಿಯ ವೈಶಿಷ್ಟ್ಯವನ್ನು ಸಮಾಜಕ್ಕೆ ಎತ್ತಿ ತೋರಿಸುತ್ತಿರಲಿ' ಎಂದೂ, ಹೃತ್ಪೂರ್ವಕವಾಗಿ ಹಾರೈಸಿ, ಈ ಚಿಕ್ಕ ಮುನ್ನುಡಿಯನ್ನು ಮುಗಿಸುತ್ತಿದ್ದೇನೆ.

ಎಮ್. ಆನಂದರಾವ್.

---

## ನಿವೇದನೆ

"ದೇವರು ಭಯಂಕರನಾಗಿಲ್ಲ, ದೇವರ ಮುಂದೆ ಭಯಪಡಬೇಕಾಗಿಲ್ಲ. ಜಡ, ಚೇತನದೊಡನೆ, ಪ್ರೇಮ ಬೆಳೆಸಿ ಬಾಳುವುದೇ, ಸುಂದರ ಜೀವನದ ಸಾಧನ, ಅದರಲ್ಲಿಯೇ ಸತ್ಯ ಹುದುಗಿದೆ. ಅದರಲ್ಲಿಯೇ ಸೌಂದರ್ಯ ಸೇರಿದೆ, ಅದರಲ್ಲಿಯೇ ಸೌಖ್ಯ ತುಂಬಿದೆ. ಆ ಸೌಖ್ಯವೇ ದೇವರ ಒಲವು. ಆ ಆನಂದವೇ ದೇವರ ಪಡಿನೆಳಲು, ಹೆಚ್ಚೇಕೆ! ಅದೇ ದೇವರು" ಎಂದು ಭಾವಿಸಿ, 'ಜೀವನ ತುಂಬಾ ಎಲ್ಲಡೆಯಲ್ಲೂ, ಎಲ್ಲಾ ಕಾಲದಲ್ಲೂ, ಎಲ್ಲರಲ್ಲೂ, ಎಲ್ಲದರಲ್ಲೂ, ಪ್ರೇಮವನ್ನು ಬೆಳೆಸಿಕೊಳ್ಳುವುದೇ ನಿಜವಾದ ಜೀವನ ತತ್ವ. ಅದೇ ಮಾನವನ ಪವಿತ್ರ ಸುಂದರ ಮಂತ್ರ!' ಎಂಬುದನ್ನು ತಿಳಿಸಿದ ಜ್ಞಾನಿಗಳಲ್ಲಿ 'ಅರಿಸ್ಟೋಟಲ'ನೂ ಒಬ್ಬನು.

ಆತನು ಆಧುನಿಕ ಜಗತ್ತಿಗೆ, ಇಂತಹ ಅಮೋಘವಾದ, ಅವಶ್ಯವಾದ ಜ್ಞಾನದಾನ ಮಾಡಿದ ಮಹಾತ್ಮ, 'Where love is there God is' ಎಂದು ದೇವರಲ್ಲಿದ್ದ ಭೀಕರತನವನ್ನು ಹೋಗಲಾಡಿಸಿದವನು ಆತ. ಭಯಪಟ್ಟು ದೇವರನ್ನು ಕಾಣುವುದಕ್ಕಿಂತಲೂ, ಪ್ರೇಮ ವಿಧಾನದಿಂದ, ದೇವರನ್ನು ಕಾಣುವ ಒಂದು ಹೊಸ ಸಂದರ್ಭವನ್ನು ಜನತೆಗೆ ಕರುಣಿಸಿದ ಉದಾರಿ ಆತ.

ಆತ ಎಲ್ಲಿಯವನೇ ಇರಲಿ! ಯಾವನೇ ಆಗಲಿ! ಆತನ ಈ ಹೊಸ ತತ್ವ, ಈ ಹೊಸ ಜಗತ್ತಿಗೆ ದೊರೆತ, ಒಂದು ಉತ್ತಮ ವರದಂತಿದೆ. ಈ ಹೊಸ ಜಗತ್ತಿನ ಮುನ್ನಡೆಗೆ, ಅದು ಮುಖ್ಯ ಮಂತ್ರದಂತಿದೆ.

ಇಂತಹ ನೀತಿ ಭರಿತ ಕಥಾವಸ್ತುವೊಂದನ್ನು ಆಯ್ದುಕೊಂಡು, ಈ ರೀತಿಯ ಏಕಾಂಕ ನಾಟಕವೊಂದನ್ನು ಸಂಗೀತ ಬೆರೆಸಿ, ರಚಿಸಲು ನಾನು ಪ್ರೇರಿತನಾದೆ. ನನ್ನ ಶಾಲೆ, ನನ್ನ ಈ ಕೃತಿಗೆ ಪ್ರೇರಕವಾಗಿದ್ದು, ಎರಡು ಬಾರಿ ಇದನ್ನು ರಂಗ ಭೂಮಿಯಲ್ಲಿ ಯಶಸ್ವಿಯಾಗಿ ಆಡಿ ತೋರಿಸುವ ಪ್ರೇಮ ತೋರಿತು.

ಈ ನನ್ನ ಕೃತಿ ಕಾಣಿಕೆಯನ್ನು ಕಂಡು, 'ಇಂತಹುದು ಪ್ರಸಾರವಾಗ ಬೇಕಾದುದು ಉಚಿತ' ಎಂದು ತಿಳಿದು, ನನ್ನ ಮಿತ್ರರೂ, ಹಿತ ಚಿಂತಕರೂ ಆಗಿರುವ' ಶ್ರೀ ಸುಮಿತ್ರಾ ಭಟ್ಟರವರು, ತಮ್ಮ 'ಬಾಲ ಸಾಹಿತ್ಯ ಮಂಡಲ' ದಿಂದ ಪ್ರಕಾಶನಗೊಳಿಸುವ ಉಪಕಾರ ನೀಡಿ ಇದನ್ನು ಹರಸಿದ್ದಾರೆ. ಅವರಿಗೆ ನನ್ನ ಹೆಚ್ಚಿನ, ಮೆಚ್ಚಿನ, ನಚ್ಚಿನ ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದೇನೆಯಲ್ಲದೆ, ಅವರ ಈ ಉಪಕಾರದ ಉದ್ಯಮಕ್ಕೆ ನೆರವಾಗಿ, 'ಕರ್ನಾಟಕ ಪ್ರಿಂಟರ್ಸ್ ಎಂಡ್ ಪಬ್ಲಿಸರ್ಸ್, ಪ್ರ್ಯಾವೇಟ್ ಲಿಮಿಟೆಡ್ ಮಂಗಳೂರು' ಇವರು ಸಕಾಲದಲ್ಲಿ, ಸುಂದರವಾಗಿ ಕೃತಿಯನ್ನು ಮುದ್ರಿಸಿ, ಸಹಕಾರ ನೀಡಿದ್ದಾರೆ. ಅವರಿಗೂ ನನ್ನ ಹಾರ್ದಿಕ ವಂದನೆಗಳು.

ಎಲ್ಲಕ್ಕಿಂತಲೂ ಮಿಗಲಾಗಿ, ಮಂಗಳೂರಿನ ಗವರ್ನ್ಮೆಂಟ್ ಆರ್ಟ್ಸ್ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾಗಿರುವ ಶ್ರೀ ಎಮ್. ಆನಂದರಾವ್, M. A. B. O. L. B. T. ಅವರು ಪ್ರೇಮ ಪೂರಿತ ಮುನ್ನುಡಿಯನ್ನು ರಚಿಸಿ, ನನ್ನನ್ನು ವಿಶೇಷ ಉತ್ಸಾಹಗೊಳಿಸಿ, ಈ ಕೃತಿಗೆ ಒಪ್ಪವಿತ್ತಿದ್ದಾರೆ. ಇವರ ಪ್ರೇಮಾಶೀರ್ವಾದಗಳಿಗೂ ನಾನು ಚಿರಋಣಿಯಾಗಿರುತ್ತೇನೆ.

ಆಡುವವರಿಗೆ ಹಾಡಲು ಅನುಕೂಲವಾಗುವಂತೆ, ಈ ನಾಟಕದ ಕೆಲವು ಹಾಡುಗಳಿಗೆ ನನ್ನಾಕೆಯು ಸ್ವರ, ಸಾಹಿತ್ಯಗಳನ್ನು ಸಂಯೋಜಿಸಿ ಸಹಕರಿಸಿದ್ದಾಳೆ. ಅದನ್ನು ಬಳಸಿಕೊಂಡು, ಈ ಕೃತಿಯನ್ನು ಸಹೃದಯರು ಪ್ರೇಮದಿಂದ ಸ್ವೀಕರಿಸಿ, ಅಲ್ಲಲ್ಲಿ, ಆಗಾಗ, ಆಡುತ್ತಾ, ಇದರ ಸುಂದರ ನೀತಿ ಸಮಾಜದ ಮೇಲೆ ಬೀಳುವಂತೆ ಮಾಡುತ್ತಾ, ಇದನ್ನು ಸಾರ್ಥಕಗೊಳಿಸುವ ಕೃಪೆ ತೋರಿ, ನನ್ನನ್ನು ಧನ್ಯನನ್ನಾಗಿಸುವರೆಂದು ಹಾರೈಸುತ್ತಿದ್ದೇನೆ. ಅದನ್ನೇ ವಿನಂತಿಸುತ್ತಿದ್ದೇನೆ ಕೂಡಾ.

'ಪದ್ಮನಾಭಾಚಾರ್ಯ.'

# “ಎಲ್ಲಿ ಪ್ರೀತಿಯೋ ಅಲ್ಲಿ ದೇವರು”

## (ಒಂದೇ ದೃಶ್ಯದ ನಾಟಕ)

[ಮಾರ್ಟಿನ್ನನು ಒಬ್ಬ ಸಮಗಾರ. ಮೆಟ್ಟು ಹೊಲಿಯುತ್ತಾನೆ. ದುಃಖದಿಂದಿರುತ್ತಾನೆ. ಆಗಂತುಕನೊಬ್ಬ ಬರುತ್ತಾನೆ.]

ಮಾರ್ಟಿನ್: ಸ್ವಾಮಿೂ ನಮಸ್ಕಾರ: (ಕೈ ಮುಗಿದು) ಇದೋ, ನಿಮ್ಮ ಪಾದರಕ್ಷೆಗಳು ಸಿದ್ಧವಾಗಿವೆ, ಸರಿಯಾಗಿವೆ, ಹಾಕಿ ನೋಡೋಣಾಗಲಿ (ಕೊಡುವನು).

ಆಗಂತುಕ: (ಕಾಲಿಗೆ ಹಾಕಿಕೊಂಡು) ಚೆನ್ನಾಗಿವೆ. ಇದೋ ಹಣ ತೆಗೆದುಕೋ (ಪಾಕೆಟನ್ನು ತೆರೆಯುತ್ತಾ) ಎಷ್ಟು ಬೆಲೆ ಇದಕ್ಕೆ?

ಮಾರ್ಟಿನ್: ನಿಮಗೆ ಮನಸ್ಸಿಗೆ ತೋರಿದಷ್ಟು ಕೊಡಿ ಸ್ವಾಮಿೂ: (ಬೇಸರದಿಂದ ತಲೆ ತಗ್ಗಿಸುತ್ತಾನೆ).

ಆಗಂತುಕ: ಇದೇನು ಬೇಸರದ ಮಾತುಗಳು! (ಮುಖ ನೋಡಿ)ಇದೇನೀ ನಿನ್ನ ಕಣ್ಣುಗಳಲ್ಲಿ ನೀರು ಇಳಿಯುತ್ತಿದೆ? ಏಕೆ ಮಾತಾಡುವುದಿಲ್ಲ? ಹಣವೆಷ್ಟೆಂದು ಏಕೆ ಹೇಳುವುದಿಲ್ಲ? ಹಣ ಬೇಡವೇ?

ಮಾರ್ಟಿನ್: ಹಣವೇತಕ್ಕೆ ಸ್ವಾಮಿೂ, ಇನ್ನು ನನ್ನ ಹೆಣಕ್ಕೆ ಹಾಕಲಿಕ್ಕೆ? ಯಾರಿಗಾಗಿ ಹಣವನ್ನು ಗಳಿಸಬೇಕಾಗಿತ್ತೋ ಅವರೆಲ್ಲಾ ಹೆಣವಾಗಿ ಹೋದರು.

ಆಗಂ. ಇದೇನೀ ವೈರಾಗ್ಯದ ಮಾತುಗಳು! ಮನೆಯುವರೆಲ್ಲಾ ಎಲ್ಲಿ?

ಮಾರ್ಟಿ ಎಲ್ಲಾ ಸತ್ತು ಹೋದರು. ಹೆಂಡತಿ ಮಕ್ಕಳನ್ನೆಲ್ಲಾ ಈ ಒಂದೇ ತಿಂಗಳಲ್ಲಿ ಕಳಕೊಂಡ ಪಾಪಿ ನಾನು.

ಆಗಂ. ನಿನ್ನ ಜತೆಗೆ ಕೆಲಸ ಮಾಡುತ್ತಿದ್ದವನು ನಿನ್ನ ಮಗನಲ್ಲವೇ?

ಮಾರ್ಟಿ. ಅಹುದು, ಅವನೂ ತೀರಿಕೊಂಡನು. ಕೆಲಸವನ್ನೆಲ್ಲಾ ಕಲಿತಿದ್ದಾನೆ. ಇನ್ನು ಅವನೇ ಈ ಉದ್ಯೋಗವನ್ನು ನಡೆಸಿ,

ನನ್ನನ್ನು ಸುಖವಾಗಿರಿಸುತ್ತಾನೆ' ಎಂದು ಆಶೆ ಕಟ್ಟಿಕೊಂಡಿದ್ದರೆ, ಅವನೂ ತೀರಿ ಹೋಗಿ, ಒಂದು ವಾರವಾಯಿತು. ಈಗ ನಾನೊಬ್ಬನೇ ಉಳಿದಿದ್ದೇನೆ, ನಮ್ಮ ಪರಿವಾರದಲ್ಲಿ ಸಾಯಲಿಕ್ಕೆ. ಈ ಸಾಯುವ ಪ್ರಪಂಚದಲ್ಲಿ 'ಈ ಹಣ ಎಲ್ಲಾ ಯಾರ ಹೆಣಕ್ಕಾಗಿ?' ಎಂದು ಕಾಣುತ್ತಿದೆ ನನಗೆ.

[ಚರ್ಚಿನ ಗಂಟೆಯ ಧ್ವನಿ ಕೇಳಿಸುತ್ತಿದೆ].

ಆಗಂ. ಅದೋ! ದೇವ ಮಂದಿರದ ಗಂಟೆಯ ಧ್ವನಿ ಕೇಳಿಸುತ್ತಿದೆ. ಪೂಜೆಯ ಸಮಯ ಸಮೀಪಿಸಿದೆ. ನಾನೀಗ ಅಲ್ಲಿಗೇ ಹೋಗುತ್ತಿದ್ದೇನೆ. ನೀನೂ ಅಲ್ಲಿಗೆ ಬಾ: ಅಲ್ಲಿ ಆ ಪೂಜೆಯನ್ನು ನೋಡುತ್ತಿರು. ಪ್ರಾರ್ಥನೆಯನ್ನು ಮಾಡುತ್ತಿರು ಆಗ ನಿನ್ನ ಮನಸ್ಸಿಗೆ ಶಾಂತಿ ಸಮಾಧಾನ ಸಿಗುತ್ತದೆ. ಬಾ ಹೊರಡು: ನಿನ್ನೀ ದುಃಖ ನಿವೃತ್ತಿಗೆ ಅದೊಂದೇ ದಾರಿ.

[ಚರ್ಚಿನ ಗಂಟೆಯ ಧ್ವನಿ ಮತ್ತೆ ಕೇಳುಸುತ್ತಿದೆ].

ಮಾರ್ಟಿ. (ಉದ್ರೇಕಗೊಂಡು) ಆ ಗಂಟೆ ಸಾಯುವವರನ್ನೆಲ್ಲಾ ಕರೆಯಲಿ! ಸಾಯುವವರೆಲ್ಲಾ ಅಲ್ಲಿ ಹೋಗಲಿ. ನಾನು ಅಲ್ಲಿಗೆ ಹೋಗಿ, ಮತ್ತೆ ನನ್ನನ್ನು ನಾನೇ ಸಾಯಿಸಿಕೊಳ್ಳಲಾರೆ. ಅದಕ್ಕೆ ಬದಲು, ಇಲ್ಲೇ ಇದ್ದು ಬಿದ್ದು ಸತ್ತುಕೊಳ್ಳುತ್ತೇನೆ. [ಕೈಮುಗಿದು] ನೀವು ದಯವಿಟ್ಟು ನಿಮ್ಮ ಮನೆಗೆ ಹಿಂತಿರುಗಿ ಹೋಗಿ. ಸಾಯುವುದಕ್ಕೆ ಅಲ್ಲಿಗೆ ಹೋಗಬೇಡಿ.

[ತಡೆಯುತ್ತಾ ಉದ್ರೇಕಗೊಂಡು ಕೂತಲ್ಲಿಂದ ಅರ್ಧ ಎದ್ದು ನಿಂತುಕೊಳ್ಳುತ್ತಾನೆ].

ಆಗಂ. ಇದೇಕೆ ಹೀಗೆ ಉದ್ರೇಕಗೊಳ್ಳುವೆ ಮಾರ್ಟಿನ್?

ಮಾರ್ಟಿ. (ಮತ್ತೂ ಉದ್ರೇಕದಿಂದ) ನನ್ನ ಮಗ ಸತ್ತುಹೋದ ಮೇಲೆ ಆ ದೇವ ಮಂದಿರಕ್ಕೆ ನಾನು ಬಹಿಷ್ಕಾರ ಹಾಕಿದ್ದೇನೆ. ಆ ಪೂಜೆ, ಆ ಪ್ರಾರ್ಥನೆಯನ್ನು ತಿರಸ್ಕಾರ ಮಾಡಿದ್ದೇನೆ.

ನೀವ್ಯಾರೂ ಹೋಗದಂತೆ ಮುಷ್ಕರ ಹೂಡುತ್ತೇನೆ. ನನ್ನ ಉದ್ಯೋಗದಲ್ಲಿ, ನಾನು ನೀತಿಯನ್ನು ಪಾಲಿಸುತ್ತಾ ಜೀವಿಸುತ್ತಿದ್ದೆ. ದೇವರನ್ನು ಹೃತ್ಪೂರ್ವಕವಾಗಿ ನಂಬುತ್ತಿದ್ದೆ. ಅದರ ಫಲವಾಗಿ, ನನ್ನ ಮುದ್ದು ಹೆಂಡತಿ ಮಕ್ಕಳನ್ನು ಕಳಕೊಂಡೆ. ಆ ಕೆಟ್ಟ ದೇವರೇ ನನಗೆ ಬೇಡ. ಆ ಹೆಸರನ್ನು ನಾನು ಹೇಳಲಾರೆ, ಕೇಳಲಾರೆ, ಸಾಯುವ ಇಚ್ಛೆ ನಿಮಗಿದ್ದರೆ, ನೀವು ಅಲ್ಲಿಗೆ ಹೋಗಿ, ನಾನು ಅಲ್ಲವೆನ್ನುವುದಿಲ್ಲ. ನಾನು ಇಲ್ಲಿಯೇ ಹೀಗೆಯೇ ಕುಳಿತು, ಕೊಳೆತು, ಕೊರಗಿ, ಸೊರಗಿ ಸಾಯುತ್ತೇನೆ, ನಿಮ್ಮ ಕೆಟ್ಟ ದೇವರು, ನನಗೆ ಕೊಟ್ಟ ವರವೆಂದರೆ, ಇದೇ, ಇಲ್ಲಿ ಹೀಗೆ ಬಿದ್ದು ಸಾಯುವುದು. ಅದನ್ನೇ ಇಲ್ಲಿ ಪಾಲಿಸುತ್ತಿರುತ್ತೇನೆ.

[ಮತ್ತೆ ಕುಳಿತು, ತಲೆಯ ಮೇಲೆ ಒಂದು ಕೈಯನ್ನು ಕೊಟ್ಟು ತಲೆಯನ್ನು ತಗ್ಗಿಸುತ್ತಾನೆ.

ಅಗಂ. ನಿನ್ನ ದುಃಖೋದ್ರೇಕವು ನಿನ್ನನ್ನು ಹೀಗೆ ಕೆರಳಿಸಿದೆ. (ಮತ್ತೆ ಗಂಟೆಯ ಧ್ವನಿ ಕೇಳಿಸುತ್ತದೆ). ಅದೋ, ಆ ಗಂಟೆಯ ಧ್ವನಿಯನ್ನು ಕೇಳು, ನಿನ್ನ ದುಃಖವನ್ನು ದೂರ ಮಾಡುವ ಒಂದು ಸಾಧನವಾಗಿದೆ ಅದು.

ಮಾರ್ಟಿ. ಛೀ! ಆ ಗಂಟೆಯ ಧ್ವನಿಯನ್ನು, ಈ ನನ್ನ ಕಿವಿಗಳಿಂದ ಕೇಳಲಾರೆ. [ಕಿವಿಗಳನ್ನು ಕೈಗಳಿಂದ ಮುಚ್ಚಿಕೊಂಡು] ಅದು ಪಾಪ! ಪರಮ ಪಾಪ! ನನಗಿನ್ನಾವ ಆಶೆಯೂ ಇಲ್ಲ. ಸಾಯುವುದೊಂದೇ ಆಶೆ. 'ಸಾವು ಬರಲಿ, ಬೇಗ ಬರಲಿ' ಎಂದು ಭಾವಿಸುತ್ತಾ, ಇಲ್ಲೇ ಸಮಾಧಿಗೆ ಕುಳಿತುಕೊಳ್ಳುತ್ತೇನೆ. ಮತ್ತೆ ಇಲ್ಲೇ ಸಮಾಧಿಯಾಗುತ್ತೇನೆ. [ಕೈ ಮುಗಿದು, ಹಟತೊಟ್ಟು ಸಮಾಧಿಗೆ ಕುಳಿತಂತೆ ಮಾಡುತ್ತಾನೆ.]

ಅಗಂ. ಮಾರ್ಟಿನ್, ನೀನು ಹೀಗೆಲ್ಲಾ ನೆನೆಸಿ, ನಿರಾಶನಾಗುವುದು ನಿನ್ನ ದೊಡ್ಡ ಅಜ್ಞಾನ, ಕೇಳು! ದೇವರ ರೀತಿ ಮತ್ತು ನೀತಿ

ಗಳನ್ನು ನೀನು ತೀರ್ಮಾನಿಸುತ್ತೀಯಾ? ನಿನ್ನ ಇಚ್ಛೆಯಂತೆಯೇ ದೇವರ ಕೃತಿಗಳು ಸಾಗಬೇಕೆಂದು, ನೀನು ಬಯಸುತ್ತೀಯಾ? ದೇವರ ತೀರ್ಮಾನವೇ, ಎಲ್ಲಕ್ಕೂ ಮೂಲ ಮತ್ತು ಅಂತ್ಯ' ಎನ್ನುವುದನ್ನು ಮರೆತೆಯಾ? ಅದು ಅವರ ಇಚ್ಛೆಯೇ ಅಲ್ಲವೇ? ಅದನ್ನು ತಿಳಿಯದೆ, ಅದನ್ನು ಒಪ್ಪದೆ ಹೀಗೆ ನಿನ್ನ ಪರಿವಾರದವರ ಮೃತ್ಯುವನ್ನು ತೀರ್ಮಾನಿಸಿದ, ದೇವರ ಮೇಲೆ ಉರಿದು ಬಿದ್ದು, ಅವರ ಮೇಲೆ ಹೀಗೆ ದೋಷದ ಹೊರೆಯನ್ನು ಹೊರಿಸುತ್ತಾ, ದ್ವೇಷದ ಹೊರೆಯನ್ನು, ನೀನು ಹೀಗೆ ರೋಷದಿಂದ ಹೊತ್ತುಕೊಳ್ಳುವುದನ್ನು ನೋಡಿದರೆ, 'ನೀನು ನಿನ್ನ ಸ್ವಂತ ಸುಖಕ್ಕಾಗಿಯೇ ಜೀವಿಸಿರಬೇಕು' ಎಂದು ಹಟತೊಟ್ಟಂತೆ ತೋರುತ್ತದೆ ಅಲ್ಲವೇ?.

ಮಾರ್ಟ. (ಕುತೂಹಲದಿಂದ) ಅಲ್ಲದೆ, ಮತ್ತೆ ನಾನು ಯಾರ ಸುಖಕ್ಕಾಗಿ ಜೀವಿಸಿರಬೇಕು?

ಆಗಂ. ನೀನು ಜೀವಿಸಿರಬೇಕು, ದೇವರಿಗಾಗಿ, ದೇವರ ಇಚ್ಛೆಗಾಗಿ, ಅದು ವಿನಹ, 'ನಿನಗಾಗಿ, ನಿನ್ನ ಸುಖಕ್ಕಾಗಿ' ಎಂದು ನೀನು ಜೀವಿಸುವುದಲ್ಲ. ಹಾಗೆ ಜೀವಿಸಿರಲೂ ಸಾಧ್ಯವಿಲ್ಲ. ಆದ್ದರಿಂದ ಹಾಗೆ ನೆನಸುವುದು ಮಾನವನ ಅಜ್ಞಾನ.

ಮಾರ್ಟ. (ಮತ್ತೂ ಕುತೂಹಲದಿಂದ) ದೇವರಿಗಾಗಿ? ದೇವರಿಗಾಗಿ ನಾನು ಏಕೆ ಜೀವಿಸಿರಬೇಕು? ನಾನು ಜೀವಿಸಿದ್ದು ದೇವರಿಗೇನಾಗಬೇಕು?

ಆಗಂ. ಅದೇ ತಿಳಿಯತಕ್ಕ ವಿಷಯ. ಅದನ್ನು ನೀನು ತಿಳಿದೆಯೆಂದರೆ ನಿನ್ನ ಈ ಚಿಂತೆ ದೂರವಾಗುತ್ತದೆ. ಎಲ್ಲವೂ ನಿನಗೆ ಸರಳವಾಗಿಯೂ ಕಾಣುತ್ತದೆ.

ಮಾರ್ಟ. [ಕೌತುಕದಿಂದ ತುಸು ಹೊತ್ತು ಮೌನವಾಗಿ ಯೋಚಿಸುತ್ತಾ] 'ದೇವರಿಗಾಗಿ ನಾನು ಜೀವಿಸಿರಬೇಕು' ಎಂದರೆ ಅದು ಹೇಗೆ? ಮತ್ತು ಏಕೆ?

ಆಗಂ. ಅದೇ ಬಹು ಗಹನ ವಿಷಯ. ಅದನ್ನು ತಿಳಿದುಕೊಂಡರೆ, ಜೀವನದಲ್ಲಿ ಈ ನಿರಾಶೆಯುಂಟಾಗುವುದಿಲ್ಲ. ಯೇಸುಕ್ರಿಸ್ತರು ಇದನ್ನೇ ತಿಳಿಸಿ, ಜೀವನದಲ್ಲಿ ಆಶೆ ತುಂಬಿಸಿದ್ದಾರೆ. ಇದೋ! ಈ ಹಿತೋಪದೇಶವನ್ನು ಓದು. [ತನ್ನ ಕೈಯಲ್ಲಿದ್ದ ಬೈಬಲಿನ ಪುಸ್ತಕವನ್ನು ತೋರಿಸುತ್ತಾ] ಇದರಲ್ಲಿ, ದೇವರಿಗಾಗಿಯೇ ಏಕೆ ಜೀವಿಸಬೇಕು? ಹೇಗೆ ಜೀವಿಸಬೇಕು? ಎಂಬುದನ್ನು ವಿವರಿಸಿದ್ದಾರೆ. ಇದು ಯೇಸುಕ್ರಿಸ್ತರ ದಿವ್ಯವಾಣಿ. ಇದನ್ನು ಓದಿದರೆ, ನಿನ್ನ ನಿರಾಶೆ ಮಾಯವಾಗುತ್ತದೆ. ನಿನ್ನೀ ದುಃಖಕ್ಕೆ ಸಮಾಧಾನ ಸಿಗುತ್ತದೆ. ಇದೋ! ತೆಗೆದುಕೋ! [ಪುಸ್ತಕವನ್ನು ಕೊಡುತ್ತಾನೆ.] ಇದೋ! ಇದರ ಹಣವನ್ನು ತೆಗೆದುಕೋ! [ಹಣವನ್ನು ಕೊಡುತ್ತಾನೆ.] ನಾನು ಹೋಗುತ್ತೇನೆ ದೇವ ಮಂದಿರಕ್ಕೆ. [ಹೋಗುತ್ತಾನೆ.]

ಮಾರ್ಟಿ. [ಬೆಪ್ಪನಂತಾಗಿ, ಪುಸ್ತಕ ತೆಗೆದುಕೊಳ್ಳುತ್ತಾನೆ. ಕುಳಿತು ಗಮನಕೊಟ್ಟು ಓದಲು ತೊಡಗುತ್ತಾನೆ. ತುಸು ಹೊತ್ತು ತಲೆಗೆ ಹಿಡಿಯುವುದಿಲ್ಲ. ಮಧ್ಯೇ ಮಧ್ಯೇ ತಲೆ ಅಲುಗಾಡಿಸಿಕೊಂಡು ಮತ್ತೂ ಬಲಾತ್ಕಾರವಾಗಿ, ಗಮನಕೊಟ್ಟು ಓದಲು ತೊಡಗುತ್ತಾನೆ. ತಲ್ಲೀನತೆ ಉಂಟಾಗುತ್ತದೆ. ಮನಸ್ಸಿಗೆ ಹಿಡಿಯುತ್ತಾ ಬರುತ್ತದೆ. ಓದುತ್ತಾ ಓದುತ್ತಾ, ಮುಖದಲ್ಲಿ ಹರುಷಭಾವ ಒಡಮೂಡುತ್ತದೆ.]

ಅಹುದು! ಅಹುದು! ಎಲ್ಲವೂ ದೇವರ ಮಹಿಮೆ, ದೇವರ ಇಚ್ಛೆ! [ಮತ್ತೂ ಓದುತ್ತಾ, ಹರುಷದಿಂದ ತಲೆದೂಗುತ್ತಾ, ಓದಿ ಓದಿ, ಬೇಸರ ಬಂದಂತೆ ಮಾಡಿ, ಬಾಯಿಯಿಂದ ಆಕಳಿಸುತ್ತಾ, ಮೈ ಕೈ ನೆಟ್ಟಿಗೆ ಮುರಿಯುತ್ತಾ] ಏಕೋ! ಒಮ್ಮೆ ಪಾನೀಯದ ಅಂಗಡಿಗೆ ಹೋಗಿ ಬರೋಣ ಎನ್ನಿಸುತ್ತದೆ. ತುಸು ಪಾನೀಯವನ್ನು ಸೇವಿಸುವ ಆಶೆಯಾಗುತ್ತದೆ. [ಎದ್ದು ಹೊರಟು, ಯೋಚಿಸುತ್ತಾ] ಬೇಡ ತಡವಾಗುತ್ತದೆ. ಇದನ್ನು ತುಸು ಓದಬೇಕೆಂದೆನಿಸುತ್ತದೆ. ಬಿಡಲು ಮನಸ್ಸು ಬರುವುದಿಲ್ಲ. [ಯೋಚಿಸುತ್ತಾ] ಅಹುದು, ನಾವು ಜೀವಿಸ

ಬೇಕಾದ ವಿಧಾನವನ್ನು ಓದಿ ತಿಳಿದೇ ಮುಗಿಸಬೇಕೆಂದಿನಿಸುತ್ತದೆ. ಆದ್ದರಿಂದ ಪಾನೀಯದ ಅಂಗಡಿಗೆ ಹೋಗಿ ಹೊತ್ತು ಹಾಳು ಮಾಡುವುದರ ಬದಲಾಗಿ, ಇಲ್ಲೇ ತುಸು ಈ ಮಾದಕ ಪಾನೀಯವನ್ನು ಸೇವಿಸಿ, ಈ ಆಲಸ್ಯವನ್ನು ಕಳೆದುಕೊಳ್ಳುತ್ತೇನೆ. [ಕುಳಿತು ಕೊಳ್ಳುತ್ತಾ] ಮತ್ತೆ ಮನಸ್ಸು ತೀವ್ರಗೊಳ್ಳುತ್ತದೆ. ಶುಭ್ರವಾಗುತ್ತದೆ. ಓದಿದರೆ ಚೆನ್ನಾಗಿ ತಿಳಿಯುತ್ತದೆ.

[ಮಾದಕ ದ್ರವ್ಯವನ್ನು ಬಾಟ್ಲಿಯಿಂದ ಗ್ಲಾಸಿಗೆ ಸುರಿದು ತುಸು ಸೇವಿಸುತ್ತಾ, ತುಸು ಓದುತ್ತಾ ಇರುತ್ತಾನೆ. ತಲೆ ಭಾರವಾಗುತ್ತದೆ. ಕಣ್ಣು ಕೆಂಪಾಗುತ್ತದೆ. ಫಕ್ಕನೆ ನಗುತ್ತಾ]

ಅಹಹಹಹಾ! ನನ್ನ ಹೆಂಡ್ತಿ ಸತ್ತ್ಹೋದ್ಳು! [ತಲೆಯನ್ನು ತಿರುಗಿಸುತ್ತಾ] ಹೋದ್ಳು! ಸತ್ತೇ ಹೋದ್ಳು! ಹಹಹಹಹಾ! ಹೋಗಲಿ! ಇನ್ನೊಮ್ಮೆ ಬೇಕಾದರೂ ಸಾಯಲಿ! ಯಾರು ಬೇಡಾಂದ್ರು? ಮಕ್ಕಳನ್ನು ಕರಕೊಂಡು ಹೋಗಿದ್ದಾಳೆ. [ಅಳುವವನಂತೆ ಮಾಡುತ್ತಾ] ಬೇಡಾಂದ್ರೆ ಕೇಳ್ಳಿಲ್ಲ. ಕರ್ಕೊಂಡೇ ಹೋದ್ಳು! ನನ್ನ ಹೆಂಡ್ತಿಯಾಗಿಯೂ ನನ್ನ ಮಾತನ್ನ ಅವಳ್ ಕೇಳ್ಲಿಲ್ಲ. ಕರಕೊಂಡೇ ಹೋದ್ಳು ಹು ಹು ಹು ಹು [ಎಂದು ಅಳುತ್ತಾ. ಮತ್ತು ಕೋಪ ತಂದುಕೊಂಡು] ಬೇಡ! ಅವಳು ಇನ್ನು ನನಗೆ ಹೆಂಡ್ತಿ ಬೇಡ! ಇನ್ನು ಹೆಂಡತಿಯಾಗಿ ಮನೆಗೆ ಬಂದರೆ, ಕುತ್ತಿಗೆಗೆ ಕೈಹಾಕಿ ದೂಡ್ಬಿಡ್ತೇನೆ! ಹಟ ಮಾಡಿದ್ರೆ, ಕುತ್ತಿಗೆ ಹಿಚ್ಕಿಬಿಡ್ತೇನೆ. ಮತ್ತೆ! ನಾನೂಂದ್ರೆ ಅಹಹಹಾ! ಸಾಮಾನ್ಯನಲ್ಲ. [ತಲೆ ಕೆಳಕ್ಕೆ ಹಾಕಿ ಬೀಳುತ್ತಾನೆ.]

[ಮತ್ತೊಬ್ಬ ಆಗಂತುಕನು ಅದೇ ದಾರಿಯಲ್ಲಿ ಹೋಗುತ್ತಿರುತ್ತಾನೆ. ಮಾರ್ಟಿನ್ನನು ತುಸು ತಲೆ ಎತ್ತಿ, ಅವನನ್ನು ನೋಡುತ್ತಾ ಕೈ ತೋರಿಸುತ್ತಾ.]

ಏ! ನಿಲ್ಲು! ಎಲ್ಲಿ ಹೋಗ್ತಿ! ನನ್ನ ಮಗನನ್ನು ಎಲ್ಲಿ ಕರ್ಕೊಂಡು ಹೋಗ್ತಿ! [ಅರ್ಧ ಎದ್ದು ನಿಂತು ಗದರಿಸುತ್ತಾನೆ.]

ಆಗಂ. [ನಿಂತು] ಇದೇನು ಹೀಗೆ ಮಾತಾಡುವಿ! ನನ್ನೊಡನೆ ನಿನ್ನ ಮಗ ಎಲ್ಲಿದ್ದಾನೆ?

ಮಾರ್ಟಿ. [ಗದರಿಸುತ್ತಾ] ಆ! ಸುಳ್ಳು ಹೇಳುವೆಯಾ? ನನ್ನ ಒಬ್ಬನೇ ಮಗ, ಬೇಡಾಂದ್ರೆ ಕರ್ಕೊಂಡು ಹೋಗಿ, ಈಗ 'ನನ್ನೊಡನೆ ಎಲ್ಲಿದ್ದಾನೆ?' ಅಂತೀಯಾ! ಬೇಗ ಕರ್ಕೊಂಡು ಬಾ! ಬಿಡಲಾರೆ! ನನಗೆ ಅವನು ಬೇಕು. ಇಲ್ಲಿ ಇಷ್ಟು ಕೆಲಸಮಾಡಬೇಕು. ಮುತ್ತ್ಯಾರು! ನೀನು ಬಂದು ಮಾಡಿ ಹೋಗ್ತಿಯಾ! [ಅಳುವವನಂತೆ ನಟಿಸುತ್ತಾ] ಹು ಹು ಹು ಹು ಆಯ್ಯೋ ನನ್ನ ಮಗನೇ! ಇವ್ರೆಲ್ಲಾ ಕೆಟ್ಟವ್ರು! ಇವ್ರ ಜತೆಗೆ ಹೋಗ್ಬೇಡ ಬಾ! ಬೇಗನೆ ಬಾ! ನಿನ್ನನ್ನು ಬಿಟ್ಟಿರೋದಕ್ಕೆ ನಂಗೆ ಸಾಧ್ಯವಿಲ್ಲ ಮಗೂ! ಹು ಹು ಹು ಹು [ಅಳುತ್ತಾ ಕುಳಿತುಕೊಳ್ಳುವನು.]

ಆಗಂ. ಕುಡಿದು ಹೀಗೆಲ್ಲಾ ಅಸಂಬದ್ಧ ಮಾತಾಡಬಾರದು!

ಮಾರ್ಟಿ. [ಕೋಪವನ್ನು ನಟಿಸಿ, ಅರ್ಧ ಏಳುತ್ತಾ] ಆ! ಕುಡಿದು! ನಾನು ಕುಡಿದಿದ್ದೇನೆ ಅಂತ ಹೇಳ್ತೀಯಾ? ಸುಳ್ಳು ಹೇಳ್ಬೇಡ ನಾನು ಕುಡೀಲಿಲ್ಲ. [ಸಮಾಧಾನ ತಾಳಿ] ಇದೋ! ನೀನು ಕುಡೀತೀಯೊ? ಹು! ಕುಡಿ! ಕುಡಿ! ಇಕೋ! ತಕೋ! [ಬಾಟ್ಲಿಯನ್ನು ತೆಗೆದು ತೋರಿಸುತ್ತಾ] ಕುಡಿ! ಬೇಕಾದಷ್ಟು ಕುಡಿ! [ಕೈನೀಡಿ ಕೊಡಲು ಹೋಗುವನು.]

ಆಗಂ. ಛೀ! ನಾನು ದೇವ ಮಂದಿರಕ್ಕೆ, ಪೂಜೆಗಾಗಿ ಪ್ರಾರ್ಥನೆಗಾಗಿ ಹೊರಟಿದ್ದೇನೆ. ಈ ಅಪವಿತ್ರ! ಈಗ ಕುಡಿಯುವುದೇ?

ಮಾರ್ಟಿ. [ಪುನಃ ಕೋಪವನ್ನು ನಟಿಸಿ ನಿಲ್ಲುತ್ತಾ] ಆ! ಅಪವಿತ್ರ ಎನ್ನುತ್ತೀಯಾ? ಅನ್ನು ಇನ್ನೊಮ್ಮೆ! ಹಲ್ಲು ಉದುರ್ಸಿಬಿಡ್ತೇನೆ.

[ಸಮೀಪಿಸಿ ಬರುತ್ತಾ] ನಿನ್ನ ಆ ದೇವ ಮಂದಿರ ಅಪವಿತ್ರ ನಿನ್ನ ಆ ಪೂಜೆ, ಆ ಪ್ರಾರ್ಥನೆ, ಅಪವಿತ್ರ! ಥೂ! [ಉಗಳು ತ್ತಾನೆ.]

ಆಗಂ. ಛೀ! ಹೀಗೆಲ್ಲಾ ನೀನು ಹೇಳಲೂ ಬಾರದು. ನಾನು ಕೇ ಳಲೂ ಬಾರದು. ಹೋಗುತ್ತೇನೆ. [ಹೊರಡುತ್ತಾನೆ.]

ಮಾರ್ಟಿ. [ಅವನನ್ನು ತಡೆಯುತ್ತಾ] ಆ! ನಾನ್ ಹೇಳ್ಬೇಕು ನೀನು ಕೇಳ್ಬೇಕು: ನಿಲ್ಲು! ಎಲ್ಲಿ ಹೋಗ್ತೀ? ನನ್ನ ಹೆಂಡ್ತೀ ಮಕ್ಳನ್ನ ಕೊಂದಿದ್ದಾನೆ. ಆ ನಿನ್ನ ದೇವ್ರು! ಆ ದೇವ ಮಂದಿರಕ್ಕೆ ಹೋಗ್ಬಾರ್ದೂಂದ್ರೆ, ಮತ್ತೆ ಹೋಗ್ತೀಯಾ? ಹೋದ್ರೆ ನಿನ್ನನ್ನೀಗ ಕೊಂದು ಬಿಡ್ತೇನೆ. ಹುಗಿದು ಬಿಡ್ತೇನೇ ಎಲ್ಲಿ? ಹೋಗು! ನೋಡುವ! ಹೋಗ್ಲಿಕ್ಕೆ ಬಿಡೋದಿಲ್ಲ: [ಅಡ್ಡ ಕಟ್ಟಿ ನಿಲ್ಲುವನು]

ಆಗಂ. ಏನಿದು? ಹೀಗೆ ದಾರಿಯಲ್ಲಿ ಹೋಗುವವರಿಗೆ ತೊಂದರೆ? ಹೋಗು: ದಾರಿ ಬಿಡು! [ಕೈಯಿಂದ ಗದರಿಸುತ್ತಾನೆ]

ಮಾರ್ಟಿ. [ಅಲ್ಲೇ ಬಿದ್ದು ಕುಳಿತು ಕೈಯಿಂದ ಅಡ್ಡ ಕಟ್ಟುತ್ತಾ] ಬಿಡೋ ದಿಲ್ಲ! ದೇವ ಮಂದಿರಕ್ಕೆ ಹೋಗ್ಬಾರ್ದೂಂದ್ರೆ!

ಆಗಂ. ನನಗೆ ದೇವ ಮಂದಿರಕ್ಕೆ ಹೋಗಲಿಕ್ಕೆ ಕುಡುಕನ ಸನ್ನಪ್ಪ ಣೆಯೋ? ಹೋಗು: [ಅಲ್ಲೇ ಹೊಡೆದು, ಅವನನ್ನು ದೂಡಿ, ಬೀಳಿಸಿ] ನಾನ್ ಹೋಗ್ತೇನೆ! ಹೊತ್ತಾಯಿತು: [ಹೋಗು ತ್ತಾನೆ.]

ಮಾರ್ಟಿ. [ತುಸು ಹೊತ್ತಿನಲ್ಲಿ ಚೇತರಿಸಿ, ಎದ್ದು ಯೋಚಿಸುತ್ತಾ] ನಾನಿಲ್ಲೇಕೆ-ಬಂದೆ? ಇಲ್ಲಿ ಹೇಗೆ ಬಿದ್ದೆ? ಯಾರು ನನ್ನನ್ನು ಹೊಡೆದುದು? ಏಕೆ ಹೊಡೆದುದು? ಅಯ್ಯೋ! ನಾನೇನೇ ನೋ ಅಂದೆನಲ್ಲಾ! ಏಕೆ ಅಂದೆ? ಅಯ್ಯೋ ಕುಡಿದು ಅಮ ಲಿನಿಂದ ಏನೇನೋ ಅಂದೆ, ಅಹುದು ನಾನು ಪವಿತ್ರ ದೇವ ವಾಣಿಯನ್ನು ಓದುವುದನ್ನು ಬಿಟ್ಟು, ದೇವರನ್ನು ಬೈದೆ. ಅಹುದು! ಆ ಕುಡಿದುದರಿಂದ ಆದ ದುಷ್ಪರಿಣಾಮ ಇದು.

ಇನ್ನು ಕುಡಿಯಬಾರದು. ಈ ಮಾದಕ ಪಾನೀಯವನ್ನು ಎಂದೂ ಕುಡಿಯಬಾರದು. ಮನುಷ್ಯನ ನೈತಿಕ ಬಲವನ್ನು ಹಾಳುಮಾಡುವಂತಹುದುದು ಇದು. ಇಲ್ಲ; ಇನ್ನು ಕುಡಿಯುವುದಿಲ್ಲ. ನನ್ನ ಓದುವ ಅಭಿರುಚಿಯನ್ನು ಹಾಳು ಮಾಡಿದ ಈ ಪಾನೀಯವನ್ನು, ಈಗಲೇ ಹಾಳುಗೆಡಹಿಬಿಡುತ್ತೇನೆ. ಇನ್ನು ನನ್ನ ಮನೆಗೆ ಇದು ಬರಬಾರದು. ಇಲ್ಲಿ ಇದು ಇರಲಾಗದು. ಈಗಲೇ ಪ್ರತಿಜ್ಞೆ ಮಾಡುತ್ತೇನೆ. [ಬಾಟ್ಲಿಯನ್ನು ಎತ್ತಿ ಸಂಬೋಧಿಸುತ್ತಾ] ಎಲಾ; ಹೋಗು: ಚೆಲ್ಲಿ ಹೋಗು: ದೇವರಾಣೆ ಇದೆ, 'ಇಲ್ಲಿ ಇನ್ನು ನೀನು ಬಂದರೆ!' ಯೇಸುಕ್ರಿಸ್ತರ ಆಣೆ ಇದೆ 'ಇನ್ನು ನಿನ್ನನ್ನು ನಾನು ಕುಡಿದರೆ!' ಹೋಗು [ಎಸೆಯುವನು] ಇನ್ನು ಓದುವುದಕ್ಕೆ ಅದು ಅಡ್ಡಿಮಾಡಲಾರದು.' ದೇವರಿಗಾಗಿ ಜೀವಿಸಬೇಕು' ಅದು ಹೇಗೆ? ತಿಳಿಯಲಿಲ್ಲ. ಈಗ ಓದಿ ತಿಳಿದುಕೊಳ್ಳುತ್ತೇನೆ. ಪಾನೀಯ ತುಸು ಬೇಕೆನ್ನಿಸುತ್ತದೆ. ಅದರಿಂದ ಈ ಆಲಸ್ಯ ಹೋಗುತ್ತದೆ. ಪಾನೀಯ ಅಂಗಡಿಗೆ ಹೋಗಿ ಬರಲೇ! [ಹೊರಟು, ಮತ್ತೆ ನಿಂತು] ಬೇಡ ಹೊತ್ತಾಗುತ್ತದೆ. ಇನ್ನು ಅಲ್ಲಿಗೂ ಹೋಗಕೂಡದು. ನಾನೇ ಇಲ್ಲಿ ತಯಾರಿಸಿ ಕುಡಿಯತ್ತೇನೆ. [ಪಕ್ಕದಲ್ಲಿ ಸ್ಟೌ ಹತ್ತಿಸಿ, ಕಾಫಿಗೆ ನೀರು ಇಡುತ್ತಾನೆ.] ಇದು ಕುದಿಯುವ ತನಕ ಓದುತ್ತಿರುತ್ತೇನೆ.

[ಕುಳಿತು ತಲ್ಲೀನತೆಯಿಂದ ಓದತೊಡಗುತ್ತಾನೆ. ಓದುತ್ತಾ ಮುಖ ಪ್ರಫುಲ್ಲಿತವಾಗುತ್ತದೆ.]

ಇದೋ ಆರನೇ ಅಧ್ಯಾಯ ಬಂತು: [ಗಮನಕೊಟ್ಟು ಓದುತ್ತಿರುತ್ತಾನೆ.]

[ಹಾಡು] ['ಆಜ್ ಹಮೇ। ಮನ ಬೇಹದ ಭಾತಾ' ಎನ್ನುವಂತೆ]

ಓರ್ವನು ಬಂದು ಕೆನ್ನೆಗೆ ಒಂದು
ಹೊಡೆದರೆ ತಿಂದು ಸಹನೆಯ ತಂದು
ಕೊಡು ಮತ್ತೊಂದು ಕೆನ್ನೆಯ ಮುಂದು

ಹೊಡೆದವನಂದು 'ತಪ್ಪಿತು' ಎಂದು
ಬಳಿಗೈ ತಂದು ಎರಗುವ ನೊಂದು

ದ್ವೇಷದಿ ದ್ವೇಷವ ರೋಷದಿ ರೋಷವ
ದೋಷದಿ ದೋಷವ ಇದಿರಿಪೆನೆಂಬುವ
ಮನಕುದ್ರೇಕವ ಕೊಡಿಸುವ ಕೆಡಿಸುವ
ಮೆದುಳ ಕೆರಳಿಸುವ ಕೃತಿ ಕೈಕೊಳ್ಳುವ

ಮಾನವನಲಿ ದಾನವತೆಯ ತುಂಬುವ
ಪಾಪವ ತೊರಿ ಅರಿ ಈ ಉಪದೇಶವ

ಅನೃತವ ಸತ್ಯದಿ ಹಗೆಯನು ಪ್ರೇಮದಿ
ಬಲವನು ವಿನಯದಿ ಕ್ಲೇಶವ ಹರುಷದಿ
ಜಯಿಸುವ ಕಾರ್ಯದಿ ಇರುವ ವಿವೇಕದಿ
ನಡೆ ಅನುದಿನದೀ ಶಾಂತಿ ವಿಧಾನದಿ
ಇದೆ ಈ ಮಾನವತೆಯ ಜಯ ನಿಜದಿ

ಮಾನವ ಗುಣವ ಮೆರೆಸುವ ತೆರವ
ತಿಳಿಯುವ ಯತ್ನದಿ ಇರು ಓ ಮಾನವ

[ಓರ್ವನು]

[ಪ್ರಫುಲ್ಲಿತ ವದನನಾಗಿ] ಅಹಹಹಹ! ಎಂತಹ ಮುತ್ತಿನಂತಹ ಮಾತು? 'ಒಂದು ಕೆನ್ನೆಗೆ ಹೊಡೆದರೆ ಮತ್ತೊಂದು ಕೆನ್ನೆಯನ್ನು ನೀಡು' ಇದು ಮಾನವತೆ ಬದಲಾಗಿ, ಅವನ ಕೆನ್ನೆಗೆ ಹೊಡೆಯಹೋದರೆ, ಅದು ದಾನವತೆ ಆಹಾ! [ಯೋಚಿಸಿ] ಹಾಗಾದರೆ, ನನ್ನಲ್ಲಿ ಮಾನವತೆ ಇದೆಯೇ, ಅಥವಾ ದಾನವತೆಯೇ? ಇಲ್ಲ. ನನ್ನಲ್ಲಿ ಮಾನವತೆ ಇಲ್ಲ. ದಾನವತೆ ಇದೆ. ಆದ್ದರಿಂದಲೇ, ನಮ್ಮೆಲ್ಲರ ಸೃಷ್ಟಿಗೆ ಕಾರಣರಾದ, ದೇವರನ್ನು ನಾನು ಬೈದೆ. ಅವರಲ್ಲಿ ನಾನು ಪ್ರತೀಕಾರದ ಬುದ್ಧಿಯನ್ನು ತೋರಿದೆ 'ದಾನವತೆಯನ್ನು ನೀಗಬೇಕು. ಮಾನವತೆಯನ್ನು ಮೆರೆಸಬೇಕು. ದೇವಾ ಇದೇ ಅಲ್ಲವೇ ನಿನ್ನ ದಿವ್ಯವಾಣಿ! ಅಹುದು: ಇದೋ! ನಿನ್ನನು ಬೈದ ನನ್ನ ದಾನವತೆಯನ್ನು

ಕ್ಷಮಿಸು. ಇನ್ನು ನಿನ್ನ ಆಜ್ಞೆಯಂತೆ, ನಾನು ನನ್ನ ಮಾನವತೆಯನ್ನು ಮೆರಿಸುತ್ತೇನೆ. ಮಾನವತೆಯನ್ನು ಮೆರಿಸುವುದಕ್ಕಾಗಿಯಲ್ಲವೇ, ನೀನು ಈ ಮಾನವ ಜನ್ಮವನ್ನು ನಮಗೆ ಕರುಣಿಸಿದುದು? ತಿಳಿಯದೆ ಮಾನವರು ದಾನವರಾಗುತ್ತಾರೆ. ನಾನಿನ್ನು ಎಂದೂ ದಾನವನಾಗಲಾರೆ. ಮಾನವನಾಗಿ ಮಾನವತೆಯನ್ನು ಕಾಪಾಡುತ್ತೇನೆ. ಅಹುದು, ಎಲ್ಲರೂ ಹೀಗೆಯೇ ಮಾಡಬೇಕು. ಸರಿ ತಿಳಿಯಿತು. 'ಇನ್ನು ಮುಂದೆ ಏನಿದೆ?' ಎಂದು ನೋಡುತ್ತೇನೆ.

ಮತ್ತೂ ಓದುತ್ತಾ ತಲೆದೂಗುತ್ತಾ ಹಾಡುತ್ತಾನೆ.

(ಹಾಡು)

ಗಡಿಯಾರ ಅಪಹಾರ ಅಪಚಾರ
ಗೈವನ ಬೈಯ್ಯದೆ ಹಿಡಿಯದೆ
ಹೊಡೆಯದೆ ಬಡೆಯದೆ ತಡೆಯದೆ

ಕರೆದು ತೆಗೆದು ನಿನ್ನಯ ಅಂಗಿಯನು
ಒಗೆದು ಒರೆದು ಉಪಯೋಗಿಸು ಎಂದು
ಪ್ರೊರೆದು ಹಿರಿದು ಸಂತೈಸುವುದದು

ಕದ್ದುದನು ಅವಗೆ ಕೈ
ನೀಡಿ ದಾನವನು ಇತ್ತು ಹರಸುವುದು
ನೀತಿ ನೀ ತಿಳಿಯೈ ಅವ
ನಾಶೆಯು ಪ್ರಬಲಿಸೆ ಲೋಭವು ಪ್ರಖರಿಸೆ

'ಬೇಕು' ಎಂದರೆ ಕೊಡರು ಎನುವ ಅಪ
ನಂಬಿಕೆ ದುರ್ಭಾವವ ಮೆರೆಸೇ ಲಾ
ಭವ ಗಳಿಸೇ ಕಾರ್ಯಕೆ ಇಳಿಸೇ ಈ
ಅನೀತಿ ಗೈವನು

ಉದಾರದಿಂದಲಿ ನಡೆಸೇ ನೀ
ನುಪಾಯದಿಂದಲಿ ತಡೆಯೇ ಆ
ದುರ್ಭಾವವ ಸದ್ಭಾವದಿ ಬದಲಿಸಿ
ಪಶ್ಚಾತ್ತಾಪದಿ ಸಭ್ಯನಾಗುವನು

ಆಹಾಃ ಎಂತಹ ನೀತಿ? ಇದಲ್ಲವೇ ಮಾನವತೆ?

[ಮತ್ತೂ ಓದುತ್ತಾ]

[ಹಾಡು]

ಬಂದು ಕೇಳಿದರೆ ಇದ್ದರೆ ಕೊಡುತಿರು
ಕೊಟ್ಟುದನೆಂದಿಗು ಹಿಂದೆ ಕೇಳದಿರು
ದತ್ತಾಪಹಾರ ದೋಷ ತಾರದಿರು

ನಿನ್ನೊಡನೆಲ್ಲರು ಎಂತು ವರ್ತಿಪುದ
ನೀನೆಳಸುವೆಯೋ ಅವರೊಡನೆಯು ಅದ
ವರ್ತಿಸಿ ನಡೆವುದು ನೀತಿಯು ತಿಳಿ ಇದ

ಅಹುದು! ಇದ್ದರೆ ಕೇಳಿದರೆ ಕೊಡಬೇಕು. ಇದ್ದು ಇಲ್ಲ ಎನ್ನಬಾರದು. ಕೊಡದಿರಬಾರದು. ಕೊಟ್ಟು ಮತ್ತೆ ಕೇಳುವುದು ಮತ್ತೂ ಅನ್ಯಾಯ. ಅಹುದು! ಇದು ದೇವರ ಇಚ್ಛೆ. ಈ ದೇವರ ಇಚ್ಛೆಯನ್ನು ನೆರವೇರಿಸುವುದಕ್ಕಾಗಿಯೇ, ನಾವು ಜೀವಿಸಿರಬೇಕು.' ದೇವರಿಗಾಗಿ ಜೀವಿಸುವುದೆಂದರೆ ಇದೇ.

ಎಲ್ಲರೂ, ಎಲ್ಲವೂ, ನಮ್ಮ ಸುಖಕ್ಕೆ ಅನುಕೂಲರಾಗಿ, ಅನುಕೂಲವಾಗಿ ಇರಬೇಕೆಂದು, ನಾವು ಬಯಸುತ್ತಿರುತ್ತೇವೆ. ನಾವೂ, ನಮ್ಮ ಎಲ್ಲವೂ, ಎಲ್ಲರ ಸುಖಕ್ಕೆ ಅನುಕೂಲರಿರಬೇಕು, ಅನುಕೂಲವಿರಬೇಕು ಎಂದು ನಾವು ಬಯಸುವುದಿಲ್ಲ. ಇದೆಂತಹ ಮನುಷ್ಯನ ದುಸ್ವಾರ್ಥ? ಕೂಡದು! ಈ ದುಸ್ವಾರ್ಥ ಇರಕೂಡದು. ನಮ್ಮ ವಿಷಯದಲ್ಲಿ ಎಲ್ಲರೂ ಹೇಗೆ ನಡೆಯಬೇಕೆಂದು ನಾವೆಣಿಸುತ್ತೇವೋ, ಹಾಗೆಯೇ ಎಲ್ಲರ ವಿಷಯದಲ್ಲಿಯೂ ನಾವು ನಡೆಯುತ್ತಿರಬೇಕು.'

ಅಹುದು ಇದು ಯುಕ್ತಿನಂತಹ ಮಾತು ತಿಳಿಯಿತು.

[ಮತ್ತೂ ಓದುತ್ತಾ]

ಉಪದೇಶವೊಂದನೂ ಅನುಸರಿಸದಿರ್ಪ
ಮತ್ತೇಕೆ ಕರೆಯುತಿಹೆ ಜೀಯ ಒಡೆಯಾ ಎಂದು.

ಆವನೆನ್ನೆಡೆ ಬಂದು ಒರೆವುದಂ ತಿಳಿಯುವಂ
ಅವ ಕಲ್ಲಿನಡಿಗಲ್ಲಿನಿಂದಿರುವ ಮನೆಯಂತೆ
ನೆರೆ ಏರೆ, ತೆರೆ ಹೊಡೆಯೆ, ಅಲ್ಲಾಡದೆಂದಿಗೂ
ಅದು ಕಲ್ಲಿನಿಂ ಕಟ್ಟೆ ಬಲುಗಟ್ಟಿಯಾಗಿಹುದು.

ಆವನೆನ್ನೊಡನಿರನೋ ಒರೆವುದಂ ಅರಿಯನೊ
ಅವ ಮಳಲ ಮೇಲೇರಿಸಿದ ಜೊಳ್ಳು ಮನೆಯಂತೆ.
ನೆರೆ ಏರಿ ತೆರೆ ಹೊಡೆದು ಕೊಚ್ಚಿ ಕೊಂಡೊಯ್ಯುವುದು
ಇದನರಿದು ನಿನ್ನನೀ ಗಟ್ಟಿ ಮನೆಯಾಗಿರಿಸು

ಗಟ್ಟಿ ಮನೆ! ಕಲ್ಲಿನ ಮನೆ! ಈ ದೇವ ವಾಣಿಯನ್ನು, ಈ ದಿವ್ಯವಾಣಿಯನ್ನು ಅನುಸರಿಸಿದರೆ, ಯಾವ ಭೀತಿಯೂ ಇಲ್ಲ. ಅಲ್ಲಾಡದ ಮನೆ ಅವನು. [ಯೋಚಿಸಿ] ಹಾಗಾದರೆ ನಾನು ಹೇಗಿದ್ದೇನೆ. ಕಲ್ಲಿನ ಅಡಿಗಲ್ಲಿನ ಮನೆಯೋ ಅಥವಾ ಮಳಲಿನ ಮೇಲಿನ ಮನೆಯೋ?.... ಅಹುದು! ನಾನೀಗ ಮಳಲಿನ ಮೇಲೇರಿಸಿದ ಮನೆಯಾಗಿದ್ದೇನೆ. ಜೊಳ್ಳು ಮನೆಯಾಗಿದ್ದೇನೆ. ಕೂಡದು! ಹಾಗಾಗಕೂಡದು. ಈ ದಿವ್ಯ ವಾಣಿಯನ್ನನುಸರಿಸುತ್ತೇನೆ. ಈ ದೇವ ವಾಣಿಯೇ ಗಟ್ಟಿ ಕಲ್ಲಿನಡಿಕಲ್ಲು. ಇದರಿಂದ ಕಟ್ಟಿದ ಗಟ್ಟಿ ಮನೆಯಾಗುತ್ತೇನೆ. ಆಗುವಂತೆ ಪ್ರಯತ್ನಿಸುತ್ತೇನೆ. ಆಗಿ ಸಂತೋಷಪಡುತ್ತೇನೆ. ದೇವಾ, ಕರುಣೆ ತೋರಿ ಕಾಪಾಡು. ....ಆರನೇ ಅಧ್ಯಾಯ ಮುಗಿಯಿತು: (ನೋಡಿ) ಕತ್ತಲೂ ಆಯಿತು. ಮಲಗುವ ಹೊತ್ತು ಸಮಿಾಪಿಸಿತು. ಓದುವುದನ್ನು ಇಂದು ಸಾಕುಮಾಡುವೆ. ಮತ್ತೆ ನಾಳೆ ಓದುವೆ.

[ಕಾಫಿ ಮಾಡಿ, ಕುಡಿದು, ಮಂಚದ ಮೇಲೆ ಹಾಸಿಗೆಯಲ್ಲಿ ಹೋಗಿ ಕುಳಿತು ಯೋಚಿಸುತ್ತಾ]

ಇಲ್ಲ! ಇನ್ನೂ ಓದಬೇಕೆಂದೆನಿಸುತ್ತಿದೆ. ನಿದ್ದೆ ಬರುವ ತನಕ 7ನೇ ಅಧ್ಯಾಯವನ್ನು ನೋಡುತ್ತೇನೆ.

[ಓದುತ್ತಾನೆ ಹಾಡುತ್ತಾನೆ.]

[ಹಾಡು] [ಮರುಗೇಲರಾ ಕೃತಿಯಂತೆ]

ಸೈಮನನೆ ನೀ ನೋಡಿವಳನು
ಕಣ್ಣೀರಿನಿಂದ ಪದ ತೊಳೆವ ಅಂದ
ತಲೆಕೂದಲಿಂದ ಒರೆಸುವಳು ಚಂದ

ನಿನ್ನೆಡೆಗೆ ಬಂದೆ ಜಲಕೊಂದು ಕುಂದೇ?
ಕೊಡದಿರ್ದೆ ಮುಂದೆ ಬಲು ಗರ್ವದಿಂದೆ

ಈ ಪಾದ ನಿನಗೆ ಪ್ರಿಯವಿಲ್ಲವಾಗೆ
ಪದ ಪಿಡಿದು ಎನಗೆ ಇವಳಿಂತು ಎಸಗೆ

ಸವರಲಿಲ್ಲ ತಲೆಗೆ ಎರೆದು ಎಣ್ಣೆ ಹೀಗೆ
ಇವಳಾದರೆನಗೆ ಎರೆಯು ಪಾದದೆಡೆಗೆ

ಎನ್ನನಿಂತು ಕರೆವ ಉಪಚಾರ ತೋರಿವ
ನಿನ್ನ ಸಿರಿಯತನವ ತೋರಿ ನೀನೆ ಮೆರೆವ

'ಕಾಲು ತೊಳೆಯಲಿಲ್ಲ! ಪಾದ ಚುಂಬಿಸಲಿಲ್ಲ! ತಲೆಗೆ ಎಣ್ಣೆ ಎರೆಯಲಿಲ್ಲ' [ಕನ್ನಡಕ, ಪುಸ್ತಕಗಸನ್ನು ಕೆಳಗಿಟ್ಟು] ಎಂತಹ ಗರ್ವಿ ಆ ಫಾರಸಿ? ತನ್ನ ಆರಾಮವನ್ನೇ ಯೋಚಿಸಿದ! ಅತಿಥಿಯ ಆರಾಮವನ್ನೇ ಯೋಚಿಸದಾದ. ಆಸನ ಕೂಡಾ ಈಯಲಿಲ್ಲ ತನ್ನ ಸುಖ ಸಂಪತ್ತಿನ ವೈಭವವನ್ನೇ ನೆನೆಸಿದ. ಯೇಸುಕ್ರಿಸ್ತರಂತಹ ಮಹಾತ್ಮರಾದ ಅತಿಥಿಗಳ ಸುಖದ ಕುರಿತು ನೆನೆಸದಾದ. [ಯೋಚಿಸಿ] ನಾನೂ ಆ ಫಾರಸಿಯಾಗಿದ್ದೇನೆಯೇ? ಯೇಸು ಮಹಾತ್ಮರು ಎಲ್ಲಿಯಾದರೂ, ನನ್ನಲ್ಲಿಯೂ ಹೀಗೆ ಅತಿಥಿಗಳಾಗಿ ಬಂದರೆ, ನಾನೂ ಹಾಗೆಯೇ ಮಾಡುವೆನೇ? ಇಲ್ಲ, ಇಲ್ಲ. ಮಾಡಲಾರೆ. ಮಾಡಬಾರದು. [ಕೈ ಮುಗಿದು ದೈನ್ಯದಿಂದ] ಸ್ವಾಮಿ, ಅತಿಥಿಯಾಗಿ ಒಮ್ಮೆ ಎನ್ನೆಡೆಗೆ ಬಾ! ಅನುಗ್ರಹಿಸು! ನಿಜವಾಗಿಯೂ ಆ ಫಾರಸಿ ನಾನಾಗದಿರುವೆ. ಆ ಸೈಮನ ನಾನಾಗದಿರುವೆ. ನಾನು ಉಪಚಾರ ಮಾಡಿ, ಅವನ ಆ ಅಪಚಾರವನ್ನು ತೊಳೆಯುವೆ, ಬಾ.

[ಕೈಮುಗಿಯುತ್ತಾ ಅಲ್ಲೇ ಮಲಗಿ ನಿದ್ದೆಹೋಗುತ್ತಾನೆ. 'ಮಾರ್ಟಿನ್' ಎಂದು ಕರೆಯುವ ಧ್ವನಿ ಕೇಳುತ್ತದೆ. ಫಕ್ಕನೇ ಎದ್ದು] ಯಾರದು? [ಸುತ್ತ ನೋಡಿ] ಯಾರೂ ಕಾಣುವುದಿಲ್ಲ. ಯಾರೋ! ಎಲ್ಲೋ! ಏನೋ! [ಪುನಃ ಮಲಗಿ ನಿದ್ದೆ ಹೋಗುತ್ತಾನೆ.

"ಮಾರ್ಟಿನ್! ಮಾರ್ಟಿನ್! ನಾಳೆ ದಾರಿ ನೋಡುತ್ತಿರು! ನಾನು ಬರುವೆ" [ಎಂದು ಮತ್ತೆ ಒಳಗಿಂದ ಧ್ವನಿ ಕೇಳಿಸುತ್ತದೆ ಸ್ಪಷ್ಟವಾಗಿ. ಪುನಃ ಫಕ್ಕನೇ ಎದ್ದು, 'ಹ' ಎಂದು, ಸುತ್ತಲೂ ಹೋಗಿ ನೋಡಿ] ಯಾರೂ ಇಲ್ಲ! 'ನಾಳೆ ನೋಡುತ್ತಿರು! ನಾನು ಬರುವೆ!' ಈ ಧ್ವನಿ ಮತ್ತೆ ಎಲ್ಲಿಂದ ಕೇಳಿಸಿತು? ಯಾರು ಇದನ್ನು ಹೇಳಿದರು? ಯಾರೂ ಇಲ್ಲಿ ಇಲ್ಲ! ಅಥವಾ ಕನಸೇ ಇದು?

ಕನಸಿನಲ್ಲಿ ಈಧ್ವನಿ ಹೀಗೆ ಕೇಳೀತೆ? ಇಷ್ಟು ಸ್ಪಷ್ಟವಾಗಿ ಇದು ಕೇಳಿಸೀತೇ?... ಏನೋ ನಾಳೆ ದಾರಿ ಕಾಯುತ್ತಿರುವೆ. ನೋಡುವೆ! ಯಾರು ಬರುವರೆಂದು?.

[ಮತ್ತೆ ಮಲಗಿ ನಿದ್ದೆ ಹೋಗುತ್ತಾನೆ. ಆ ಎಲ್ಲಾ ಹಾಡುಗಳೂ, ಮತ್ತೊಮ್ಮೆಯೂ ಕೇಳುತ್ತವೆ. ಕನಸಿನಲ್ಲಿಯೇ ಅದನ್ನು ನೆನೆದು, ಸಂತೋಷಪಡುತ್ತಿರುತ್ತಾನೆ. ಹಾಡು ಮುಗಿದೊಡನೆಯೇ ಮತ್ತೆ ಎದ್ದು ನೋಡಿ]

ಹಃ ಬೆಳಗಾಯಿತು! ಮುಖ ತೊಳೆದು, ಟೀಗೆ ಇಟ್ಟು, ಮತ್ತೆ ಕೆಲಸಕ್ಕೆ ಕೂತುಕೊಳ್ಳುತ್ತೇನೆ! ದಾರಿ ನೋಡುತ್ತೇನೆ!

[ಒಳಗೆ ಹೋಗಿ, ಮುಖ ತೊಳೆದು ಬಂದು, ಮುಖ ಒರಸುತ್ತಾ, ಟೀ ಸಿದ್ಧಮಾಡಿ, ಕೆಲಸಕ್ಕೆ ಕೂತುಕೊಳ್ಳುತ್ತಾನೆ. ಆಗಾಗ ದಾರಿ ನೋಡುತ್ತಾ ಇರುತ್ತಾನೆ. ಒಬ್ಬ ಮುದುಕನು, ಸುಣ್ಣದ ಬಕೆಟನ್ನೂ, ಸುಣ್ಣ ಬಳಿಯುವ ಬ್ರಶ್ಶನ್ನೂ, ಹಿಡಿದುಕೊಂಡು ಬಂದು, ಬಳಿಯ ಗೋಡೆಗೆ, ಸುಣ್ಣ ಬಳಿಯ ತೊಡಗುತ್ತಾನೆ. ಯಾರೋ ಬಂದಂತೆ ಭಾಸವಾಗಿ ಎದ್ದು ಬಂದು ಇಣಿಕಿ, ಬಂದ ಮುದುಕನನ್ನು ನೋಡಿ]

ಓ! ಗೋಡೆಗೆ ಬಣ್ಣ ಬಳಿಯುವವನು! ಮನೆಯ ದನಿಯ ಆಜ್ಞೆಯಂತೆ ಸುಣ್ಣ ಬಳಿಯಲು ಬಂದಿರಬೇಕು. 'ಯೇಸು ಕ್ರಿಸ್ತರು ಅತಿಥಿಯಾಗಿ ಬಂದರೋ' ಎಂದು ಒಮ್ಮೆಗೇ ಭ್ರಮಿಸಿಕೊಂಡೆ. [ಪುನಃ ಹೋಗಿ ಕುಳಿತು, ಕೆಲಸಕ್ಕೆ ತೊಡಗುತ್ತಾನೆ.

ಮುದುಕ

ಸ್ಟೆಫನ್: [ಸುಣ್ಣ ಬಳಿಯುತ್ತಾ ನಡುಗುತ್ತಾ] ಅಬ್ಬಾ! ಏನು ಛಳಿ! ಮೊದಲೇ ದೇಹದಲ್ಲಿ ಬಲವಿಲ್ಲ! ಕೈಯಲ್ಲಿ ತ್ರಾಣವಿಲ್ಲ! ಸುಣ್ಣ ಬಳಿದುಬಳಿದು, ಕೈಯ್ಯೂ ಸೋತು ಸುಣ್ಣವಾಗುತ್ತಿದೆ. ಛಳಿಯಿಂದ ಬೇರೆ, ಕೈ ಹೆಪ್ಪುಗಟ್ಟಿಹೋಗಿದೆ. ಕೈ ಎತ್ತಲಾಗುವುದಿಲ್ಲ. ಮೈ ದುರ್ಬಲವಾಗಿದೆ. ಕೆಲಸಮಾಡಲು ಏನೂ ಸಾಧ್ಯವಾಗುವುದಿಲ್ಲ. ತುಸು ಇಲ್ಲೇ ಸೈರಿಸಿಕೊಂಡು, ಸುಧಾರಿಸಿಕೊಂಡು ಮತ್ತೆ ಪ್ರಾರಂಭಿಸುತ್ತೇನೆ.

[ಅಲ್ಲೇ ಗೋಡೆಯ ಬಳಿ ಒರಗಿ, ಕೈಯನ್ನು ಗೋಡೆಗೆ ಆಧರಿಸಿ, ಛಳಿಗೆ ಮುದುಡಿಕೊಂಡು, ನಡುಗುತ್ತಾ ಕುಳಿತಿರುತ್ತಾನೆ.]

ಮಾರ್ಟಿನ್. [ಇಣಿಕಿ ನೋಡಿ] ಪಾಪ! ಹಣ್ಣು ಮುದುಕ! ಕೆಲಸಮಾಡಲು ಶಕ್ತಿ ಇಲ್ಲದೆ, ಸೋತಿದ್ದಾನೆ! ಛಳಿಯಿಂದ ನಡುಗುತ್ತಿದ್ದಾನೆ! ಇರಲಿ. ಟೀ ಗೆ ಇಟ್ಟಿದ್ದೇನೆ! ಕುದಿದಿದೆ. ಸರಿ ಮಾಡಿ, ಅವನನ್ನು ಕರೆದು ತುಸು ಕೊಡುತ್ತೇನೆ. [ಟೀ ಸರಿಮಾಡಿ ಕೈ ಚಪ್ಪಾಳೆ ಹೊಡೆದು, ತುಸು ಸರಿದು ಬಂದು ಕರೆಯುತ್ತಾ] ನೋಡು ತಾತಾ! ಇಲ್ಲಿ ನೋಡು! [ಸ್ಟೆಫನ್ ತಿರುಗಿ ಈ ಕಡೆ ನೋಡುತ್ತಾನೆ] ಇಲ್ಲಿ ಬಾ ತಾತಯ್ಯ! ತುಸು ಹೊತ್ತು ಇಲ್ಲಿ ಒಳಗಿದ್ದು ಹೋಗು! ಛಳಿಯಿಂದ ಹೆಪ್ಪುಗಟ್ಟಿದ್ದೀಯೋ! ಸ್ವಲ್ಪ ಇಲ್ಲಿ ಬೆಚ್ಚಗೆ ಮಾಡಿಕೊಂಡು, ಮತ್ತೆ ಕೆಲಸಮಾಡುವಿಯಂತೆ! ಬಾ.

ಸ್ಟೆಫನ್ [ನಡುಕದ ಧ್ವನಿಯಿಂದ] 'ದೇವರು ನಿನ್ನನ್ನು ಕರುಣಿಸಲಿ' [ಎಂದು ಎದ್ದುಬಿದ್ದಂತೆ ಬರುತ್ತಾ] ಅಹುದು! ಮೈ ಕೈ ಎಲ್ಲಾ ಗಟ್ಟಿಕಟ್ಟಿಹೋಗಿದೆ. ಕೆಲಸಮಾಡಲಿಕ್ಕೇ ಅದು ಅಲ್ಲಾಡುವುದಿಲ್ಲ. ಶಕ್ತಿಗುಂದಿದ್ದೇನೆ.

[ಬಳಿಬರುವಾಗ, ಬಿದ್ದಂತಾಗುತ್ತಾನೆ. ಮಾರ್ಟಿನ್ ಫಕ್ಕನೆ ಹಿಡಿದು ಬೀಳದಂತೆ ಮಾಡಿ, ಹಾಸಿಗೆಯ ಮೇಲೆ ಕರೆದುಕೊಂಡು ಕೂಡಿಸುವನು. ಟೀ ತರುತ್ತಾ]

ಮಾರ್ಟಿನ್ ಇದೋ! ಬಿಸಿ ಟೀ ಇದೆ. ಇದನ್ನು ಕುಡಿ ತಾತಯ್ಯ! ಸ್ವಲ್ಪ ಸೈರಿಸಿಕೊಳ್ಳುವಂತಾಗುತ್ತದೆ. [ಗ್ಲಾಸಿಗೆ ಹೊಯ್ದು ಕೊಡುತ್ತಾನೆ. ಮತ್ತೊಂದರಲ್ಲಿ ತಾನೂ ಹೊಯ್ದುಕೊಂಡು ಕುಡಿಯಲು ಇಟ್ಟುಕೊಳ್ಳುತ್ತಾನೆ. ಸ್ಟೆಫನ್, ಗಬಗಬನೆ ಕುಡಿದು, ಖಾಲಿ ಗ್ಲಾಸಿಗೆ, ಅಲ್ಲಿಟ್ಟಿದ್ದ ಸಕ್ಕರೆಯಲ್ಲಿ ಸ್ವಲ್ಪ ಸಕ್ಕರೆ ಹಾಕಿ, ಇಡುತ್ತಾ]

ಸ್ಟೆಫ. ಬಹಳ ಉಪಕಾರ! ಬಹಳ ಉಪಕಾರ!

ಮಾರ್ಟಿನ್. [ಮತ್ತೂ ಆತನಿಗೆ ಬೇಕಾಗಿದೆ ಎಂದು ತಿಳಿದು] ಇನ್ನೂ ಸ್ವಲ್ಪ ಕುಡೀತ್ತೀಯಾ ತಾತಯ್ಯ? ಕುಡಿ! ಕುಡಿ! [ಮತ್ತೆರಡು ಗ್ಲಾಸು ಟೀ ಹಾಕುತ್ತಾನೆ. ಮಾರ್ಟಿನ್ನನು ಆಗಾಗ ತುಸು ಸರಿದು

ಸರಿದು ದಾರಿ ಇಣಿಕಿ ನೋಡುತ್ತಾ ಇರುತ್ತಾನೆ.]

ಸ್ಟೆಫ. ಏಕೆ? ಯಾರಾದರೂ ಬರುವುದನ್ನು ಕಾಯುತ್ತಿದ್ದೀರಾ?

ಮಾರ್ಟಿ. ಹ ಹ ಹ [ತಲೆ ಅಲ್ಲಾಡಿಸುತ್ತಾ ಮತ್ತೊಮ್ಮೆ ನೋಡುವನು]

ಸ್ಟೆಫ. ಯಾರು ಬರುವುದನ್ನು?

ಮಾರ್ಟಿ. ಅವನ್ನು ಹೇಳುವುದಕ್ಕೇ ತುಸು ಸಂಕೋಚವಾಗುತ್ತಿದೆ ನನಗೆ.

ಸ್ಟೆಫ. ಅದೇಕೆ?

ಮಾರ್ಟಿ. ಬರುವವರು ಯಾರು? ಎಂಬುದನ್ನು ನಾನೇ ಸ್ಪಷ್ಟ ಅರಿಯೆ. ನಿಜವಾಗಿಯೂ ಬರುವರೋ ಇಲ್ಲವೋ ಎಂಬುದೂ ತಿಳಿಯದು.

ಸ್ಟೆಫ. ಮತ್ತು ಅದು ಹೇಗೆ-ನಿರೀಕ್ಷಿಸುವಿರಿ?

ಮಾರ್ಟಿ. ನಿನ್ನೆ ರಾತ್ರೆ ನಿದ್ದೆಹೋಗಿದ್ದಾಗ, ಒಂದು ಧ್ವನಿ ಕಿವಿಗೆ ಕೇಳಿಸಿತು, 'ನಾಳೆ ದಾರಿ ನೋಡುತ್ತಿರು. ನಾನು ಬರುವೆ' ಎಂದು. ಅದು ಯಾರು ಹೇಳಿದುದು? ಅಥವಾ ನಿಜವೋ ಇಲ್ಲವೇ ಕನಸೋ? ಎಂಬುದನ್ನೂ ನಾನರಿಯದಾದೆ. ಅದನ್ನೇ ಯೋಚಿಸಿ ದಾರಿ ನೋಡುತ್ತಿದ್ದೇನೆ;

ಸ್ಟೆಫ. ಹು! ಹು! [ತಲೆಯಲ್ಲಾಡಿಸುತ್ತಾನೆ.

ಮಾರ್ಟಿ. ಅದಿರಲಿ ತಾತಯ್ಯಾ! ನಿನ್ನೆ ನಾನು ಯೇಸುಕ್ರಿಸ್ತರ ದಿವ್ಯವಾಣಿ ಯನ್ನು ಓದುತ್ತಿದ್ದೆ. ಅದರಲ್ಲಿ ಅವರು ನಮ್ಮ ನಡುವೆ ಜೀವಿಸಿದ ಹಾಗೂ ಪಾಡುಪಟ್ಟ ಎಲ್ಲಾ ವಿಚಾರಗಳನ್ನು ಓದಿ ತಿಳಿದೆ. ನೀನೂ ಅದನ್ನು ತಿಳಿದಿದ್ದೀಯಾ ತಾತಯ್ಯಾ!

ಸ್ಟೆಫ. ಅಹುದು! ಕೇಳಿ ತಿಳಿದಿದ್ದೇನೆ. ಆದರೆ ಓದಿ ತಿಳಿಯಲು ನಾನು ಅಸಮರ್ಥನಾಗಿದ್ದೇನೆ.

ಮಾರ್ಟಿ. ನಿನ್ನೆ ಏಳನೇ ಅಧ್ಯಾಯುವನ್ನು ಓದುತ್ತಿದ್ದೆ. ಫಾರಸಿಯೊಬ್ಬನು ಯೇಸುಕ್ರಿಸ್ತರನ್ನು ಕರೆದು ಆದರಿಸದೆ ಇದ್ದ ಕತೆಯನ್ನು ಓದಿ ಅವನ ಆ ಅಪಚಾರದ ಅನ್ಯಾಯದ ಕುರಿತು, ಚಿಂತಿಸುತ್ತಾ ನಿದ್ದೆಹೋಗಿದ್ದಾಗ, 'ನಾಳೆ ದಾರಿ ನೋಡುತ್ತಿರು, ನಾನು ನಾನು ಬರುವೆ' ಎನ್ನುವ ಮಾತು, ಬಹು ಸ್ಪಷ್ಟವಾಗಿ, ಒತ್ತಿ ನನ್ನ ಕಿವಿಗೆ ಕೇಳಿಸಿತಾದ್ದರಿಂದ, ಆ ಮಾತನ್ನು ನಾನು ಕಡೆ

ಗಣಿಸದಾದೆ. ಆದ್ರಿಂದ ಬರಬಹುದಾದ ಅವರನ್ನು 'ಅದಾ
ರೋ ಅರಿಯೆ' ನಿರೀಕ್ಷಿಸುತ್ತಿದ್ದೇನೆ.

ಸ್ಟೆಫ. ಸರಿ. ಸರಿ. [ತಲೆಯಲ್ಲಾಡಿಸುತ್ತಾ, ಕುಡಿದ ಗ್ಲಾಸನ್ನು ಪಕ್ಕದ ಸ್ಟೂಲಿನಲ್ಲಿಡುವನು]

ಮಾರ್ಟಿ. ಇನ್ನೂ ತುಸು ಕುಡಿ ತಾತಾ! ನಿನ್ನ ಬಳಲಿದ ದೇಹ ಬೆಚ್ಚಗಾಗಲಿ ತಾತಾ! ತೊಳಲಿದ ಹೃದಯ ತಣ್ಣಗಾಗಲಿ ತಾತಾ! [ಪುನಃ ಗ್ಲಾಸಿಗೆ ಟೀಯನ್ನು ಸುರಿಯುವನು 'ಹ' ಎಂದು ಅವನು ಮತ್ತೂ ಕುಡಿಯುತ್ತಿರುವನು] ನಾನಿದನ್ನೇ ಯೋಚಿಸುತ್ತಿದ್ದೆ ತಾತಯ್ಯ! 'ಯೇಸುಕ್ರಿಸ್ತರು ಜೀವಿಸಿದ್ದಾಗ, ಅವರು ಯಾರನ್ನೂ ಹೀನವಾಗಿ ಕಂಡುದಿಲ್ಲ. ಅವರು ಹೆಚ್ಚಾಗಿ ಹಳ್ಳಿಗಾಡು ಅಜ್ಞಾನಿಗಳಿಗೆ ಉಪದೇಶ ಮಾಡುತ್ತಿದ್ದರು. ಬಡವರೊಡನೆಯೇ ಒಡನಾಡುತ್ತಿದ್ದರು. ಅಲ್ಲದೆ ಅವರು, ನಮ್ಮಂತಹ ಅಜ್ಞಾನಿ, ಪಾಪಿ, ಕೆಲಸಗಾರರನ್ನೇ, ತನ್ನ ಶಿಷ್ಯರನ್ನಾಗಿ ಮಾಡಿಕೊಳ್ಳುತ್ತಿದ್ದರು. ಅವರು ಇದನ್ನೇ ಹೇಳುತ್ತಿದ್ದರು ತಾತಯ್ಯ! [ಸ್ಫೂರ್ತಿಯಿಂದ]

ತಾನು ದೊಡ್ಡವನೆನುವುದು ತಿಳಿವುದು
ಸಣ್ಣವನಾಗುವ ಸಾಧನವು
ತಾನು ಸಣ್ಣವನೆನುವುದು ತಿಳಿವುದು
ದೊಡ್ಡವನಾಗುವ ಸಾಧನವು

[ಸ್ಟೆಫನ್, ಗಮನಕೊಟ್ಟು ಕೇಳುತ್ತಿರುತ್ತಾನೆ. ಮಾರ್ಟಿನ್ ಮತ್ತೂ ಸ್ಫೂರ್ತಿಗೊಂಡು ಕುಳಿತಲ್ಲಿಂದಲೇ ಎದ್ದು ನಿಂತು]

ಅವರು ಇನ್ನೂ ಹೇಳುತ್ತಾರೆ ತಾತಯ್ಯ!

'ನೀನೆನ್ನನು ಜೀಯ ಒಡೆಯಾ ಎಂದೇನನನ್ನುವೆಯಾ'
ಅನ್ನುತಿರು! ಅದು ನಿನ್ನಿಚ್ಛೆ!
ಆದರೆ ನಾನಾವಾಗಲು ನಿನ್ನ ಪಾದವನೆ ತೊಳೆಯುತ್ತಿರುವೆ
ಇದು ನನ್ನಿಚ್ಛೆ! ಏಕೆಂದೊಡೆ
ಅವನೊಬ್ಬನೆ ಆಗುವ ಅರ್ಹನು ಅಖಂಡ ಮುಖಂಡನು
ಯಾವನು ತಾನು ತನ ತಂಡದ

ನಿಜ ಸೇವಕನೆಂಬುದನರಿವನೊ! ಸೇವಕನಾಗಿರಬಲ್ಲನೊ!
ಮತ್ತವನೇ ಬಡವರ, ದೀನರ, ದಲಿತರ,
ಪೂರ್ಣ, ಸತ್ಯ, ಪ್ರತಿನಿಧೀಕರಿಸಲು ಯೋಗ್ಯನು

ಸ್ಟೆಫನ್, ಟೀ ಅರ್ಧ ಕುಡಿದು, ಗ್ಲಾಸನ್ನು ಕೈಯಲ್ಲೇ ಹಿಡಿದುಕೊಂಡು, ಅದನ್ನು ಕೇಳುತ್ತಾ, ಸಂತೋಷದಿಂದಿರುತ್ತಾನೆ. ಕಣ್ಣಲ್ಲಿ ಆನಂದಬಾಷ್ಪ ಸುರಿಯುತ್ತದೆ.]

ಮಾರ್ಟಿ ಇನ್ನೂ ಸ್ವಲ್ಪ ಟೀ ಕೊಡಲೇ? ಕುಡಿಯುವೆಯಾ ತಾತಯ್ಯ!

ಸ್ಟೆಫ. ಬೇಡ! ಬೇಡ! [ಇದ್ದುದನ್ನು ಕುಡಿದು] ಬಹಳ ಉಪಕಾರ! ಬಹಳ ಉಪಕಾರ! ಗ್ಲಾಸನ್ನು ಕೆಳಗಿಟ್ಟು] ಅಯ್ಯಾ ಛಳಿಯಿಂದ ನಡುಗುತ್ತಿದ್ದೆ. ಶಕ್ತಿಗುಂದಿ ಬಿದ್ದಿದ್ದೆ. ಕರೆದು ಉಪಚರಿಸಿದಿರಿ. ಬೆಚ್ಚಗಾಗಿರಿಸಿದಿರಿ. ಈ ಅಮೂಲ್ಯ ದೇವವಾಣಿಯನ್ನರುಹಿ, ಈ ಹೃದಯವನ್ನು ತಣಿಸಿದಿರಿ. ಆತ್ಮವನ್ನು ತೃಪ್ತಿಗೊಳಿಸಿದಿರಿ. ತುಂಬಾ ಉಪಕಾರ, ನಾನೀಗ ಹೋಗ್ತೇನೆ. ಮತ್ತೆ ಕೆಲಸವನ್ನು ಪ್ರಾರಂಭಿಸುತ್ತೇನೆ. [ಹೊರಡುವನು]

ಮಾರ್ಟಿ. ಆಗಲಿ! ಸಂತೋಷ! ಯಾವಾಗಲೂ ಹೀಗೆಯೇ ಬರುತ್ತಿರಿ. ಸ್ವಾಗತವಿದೆ. ನಿಮ್ಮಂತಹ ಅತಿಥಿಗಳ ಆಗಮನದಿಂದ, ನನಗೆ ಬಹಳ ಸಂತೋಷವಾಗುತ್ತದೆ.

ಸ್ಟೆಫ. ಆಗಲಿ! ಆಗಲಿ! ದೇವರು ನಿಮ್ಮನ್ನು ಆಶೀರ್ವದಿಸುತ್ತಾನೆ. [ಹೋಗುತ್ತಾನೆ. ಮತ್ತೆ ಕೆಲಸಕ್ಕೆ ತೊಡಗುತ್ತಾನೆ.]

ಮಾರ್ಟಿ. [ಉಳಿದ ಟೀಯನ್ನು ತಾನೇ ಕುಡಿದು ಪುನಃ ಕೆಲಸಕ್ಕೆ ಕುಳಿತು] 'ನಾಳೆ ದಾರಿ ನೋಡುತ್ತಿರು, ನಾನು ಬರುವೆ' ಯಾರು ಬರುವುದು? ಬರಬಹುದು ನೋಡುತ್ತಿರುವೆನು.

[ನೋಡುತ್ತಾ (ಇಣಿಕಿ) ಕೆಲಸಮಾಡುತ್ತಿರುತ್ತಾನೆ. ಸ್ಟೆಫನ್ ಕೆಲಸ ಮಾಡುತ್ತಾ ಮಾಡುತ್ತಾ ಹೋಗುತ್ತಾನೆ. ಹೆಂಗಸೊಬ್ಬಳು ತಲೆಯಲ್ಲಿ ಹಣ್ಣಿನ ಬುಟ್ಟಿಯನ್ನೂ ಹೆಗಲಲ್ಲಿ ಕಟ್ಟಿಗೆಯ ಚೂರುಗಳ ಹೊರೆಯನ್ನೂ ಹೊತ್ತುಕೊಂಡು ಬರುತ್ತಾಳೆ.]

ಹೆಂಗಸು: ಹಣ್ಣು ಬೇಕೇ ಹಣ್ಣು? ಒಳ್ಳೊಳ್ಳೇ ಹಣ್ಣು! ಸಕ್ಕರೆಯಂತಹ ಹಣ್ಣು! ಸೇಬಿನ ಹಣ್ಣು! ಮಾವಿನ ಹಣ್ಣು! ಮುಸುಂಬಿ ಹಣ್ಣು! ಕಿತ್ತಳೇ ಹಣ್ಣು! ದ್ರಾಕ್ಷೆ ಹಣ್ಣು! ಆ ಹಣ್ಣು! ಈ ಹಣ್ಣು!

ಎಲ್ಲಾ ಐತೀ! ಕಿರಾಯಾ ಕಮ್ಮಿ ಐತೀ! ಸೊಲ್ಪಾನೇ ಉಳಿದೈತೀ! ಬೇಕಾದೋರ್ ಬ್ಯಾಗನೇ ಬಂದು ಕೊಂಡ್ಕೊಳ್ಳೀ! ಹಣ್ಣು ಬೇಕಾ ಹಣ್ಣು!

[ಮಾರ್ಟಿನನು ಇಣಿಕಿ ನೋಡುವನು. ಹೆಂಗಸು ಅವನ ಬಳಿಗೆ ಬರುವಳು.]

ಬೇಕೇಂಡ್ರೀ? ಕೊಂಡುಕೊಳ್ತೀರೇಂಡ್ರೀ?

ಮಾರ್ಟಿ. ಬೇಡಮ್ಮಾ! ಹಣ್ಣು ಗಿಣ್ಣು ಬೇಡ! ಆ ಕಟ್ಟಿಗೆ ಹೊರೆ ಮಾರೋದೇನಮ್ಮಾ?

ಹೆಂಗಸು. ಇಲ್ರೀ ಅದ್ ಮನ್ಯಾಗೊಯ್ಯಾಕ್ ತಂದಿನ್ನಿ. ದಾರ್‍ಯಾಗೆ ಒಂದು ದೊಡ್ಡ ಮನೇ ಕಟ್ತಿದಾರ್ರೀ!
ಅಲ್ಲಿ ದಾರ್‍ಯಾಗೇ ಇದ್ ಬಿದ್ದಿತ್ತ್ರೀ! ಒಂದು ಹೊರೆ ಹೊತ್ಕೊಂಡು ಬಂದೀನ್ರೀ! ಹಣ್‌ಗಳ್ ಬಲ್ ಹಣ್ಣಾಗೈತ್ರೀ! ಅಪ್ಪಟಾ ಹಣ್‌ಗಳ್ ಕಂಡ್ರೀ! ಒಂದ್ ಡಜನ್ನಾ ಕೊಂಡುಕೊಳ್ರೀ! ಏನ್ ಕೊಡ್ಲೇಂಡ್ರೀ?

ಮಾರ್ಟಿ. ಬೇಡಮ್ಮಾ! ಬೇರೆ ಕಡೆಗೆ ಹೋಗಮ್ಮಾ!

ಹೆಂಗ. ಇದೆಂತಾ ಪ್ಯಾಟೀನ್ರೀ [ತೆರಳುತ್ತಾ] ದುಡ್ಡಿಲ್ದಾ ಪ್ಯಾಟೀ! ದೊಡ್ಮನ್ಶಿಲ್ದಾ ಪ್ಯಾಟೀ! ಒಬ್ರೂ ಕೊಂಡ್ಕೊಳ್ಳಾಕಿಲ್ಲ. ಬಡೋವ್ರ ಪ್ಯಾಟೀಂತ ಕಾಣ್ತೈತೀ! ಬರೀ ಸಪ್ಪಗೈತೀ! ಇದ್ನಾ ಹೊತ್ತು ತಲೆ ಬಾರವಾಗೈತ್ರೀ! ಇದ್ನಾ ಹೊತ್ತು, ಈ ಹೆಗಲಾ ಸೋತ್ ಹೊಗೈತ್ರೀ! ಇಲ್ಲೇ ಒಮ್ಮೆಗೇ ಇಳ್ಸಿ ಹೆಗಲಾ ಬದಲಿಸ್ತಿನ್ರೀ!

[ಹಣ್ಣಿನ ಬುಟ್ಟಿಯನ್ನು ಇಳಿಸುತ್ತಾಳೆ. ಮತ್ತೊಂದು ಬದಿಗೆ ತಿರುಗಿ, ಕಟ್ಟಿಗೆ ಹೊರೆ ಇಳಿಸಿ, ಅದನ್ನು ಬಿಡಿಸಿ, ಮತ್ತೆ ಸರಿಯಾಗಿ ಕಟ್ಟುತ್ತಿರುವಳು. ಒಬ್ಬ ಹುಡುಗ ಹಿಂದಿನಿಂದ ಬಂದು, ಬುಟ್ಟಿಗೆ ಕೈಹಾಕುವನು. ಮಾರ್ಟಿನ್ ಇಣಿಕಿ ನೋಡುವನು. ಹೆಂಗಸು ಫಕ್ಕನೇ ತಿರುಗಿ ನೋಡಿ ಕೋಪದಿಂದ]

ಲೋ! ಇಲ್ಲೂ ಬಂದ್ರೇನೋ? [ಎದ್ದು ಹಿಡಿಯಲು ಹೋಗುವಳು. ಹುಡುಗ ಓಡುತ್ತಾನೆ. ಹೆಂಗಸೂ ಓಡಿ,

ಅವನ ಅಂಗಿ ಹಿಡಿದು ಎಳೆಯುವಳು. ಹುಡುಗ ಬಿಡಿಸಿಕೊಳ್ಳಲು ವದ್ದಾಡುವನು.]

ಆ! ಓಡ್ಹೋಗ್ತೀಯಾ? ಎಲ್ ತಪ್ಸ್ಕೊಂಡು ಹೋಗ್ತೀಯಾ? [ರಟ್ಟೆ ಹಿಡಿದು] ನಿನ್ನನ್ ಬಿಡಾಕಿಲ್ಲ. ಇನ್ ಕೊಂಡ್ಹೋಗ್ತ್ಯಾ? ಇನ್ ಕದ್ದೊಯ್ತ್ಯಾ? [ಎನ್ನುತ್ತಾ, ತಲೆಗೆ ಎರಡು ಕುಟ್ಟಿ ಕೊಡ್ತಾಳೆ. ಹುಡುಗ ಅಯ್ಯೋ! ಅಯ್ಯೋ ಎನ್ನುತ್ತಾನೆ. ಮಾರ್ಟಿನ್ ನೋಡಿ ಬರಲು ಏಳುತ್ತಾನೆ.]

ಹೆಂಗ. ಅಯ್ಯೋಂತೆ ಅಯ್ಯೋ? ಥೂ! ಪೋಲಿ ಹುಡುಗರ್ರಾ? ಥೂ! ತುಂಟ ಹುಡುಗರ್ರಾ! [ಕಿವಿ ಹಿಂಡುತ್ತಾ] ಯಾರು ಕಲಿಸಿ ಕೊಟ್ರೋ ನಿಮಗೀ ವಿದ್ಯೇನಾ? [ಅಯ್ಯೋ! ಎನ್ನುತ್ತಾನೆ ಹು ಹುಡುಗ].

ಮಾರ್ಟಿ. [ಓಡಿ ಬಂದು] ಅಮ್ಮಾ! ಪಾಪ! ಚಿಕ್ಕುಡ್ಗಾ! ಬಿಟ್ಬಿಡ್ರಮ್ಮಾ!

ಹೆಂಗ. ಸಾಕ್ ಹೋಗ್ರೀ! ಈ ಸೊಕ್ಕಿನ್ ಮಕ್ಳನ್ನ ಬಿಡೋದಲ್ಲ! ಅಮ್ಮಯ್ಯಾ! [ಕೈಯನ್ನು ತನ್ನ ಬಾಯಿಗೆ ಮುಚ್ಚಿಕೊಂಡು] ಇವ್ರುಗಳ್ನ ಹೀಗೆ ಬಿಟ್ ಬಿಟ್ರೇ, ಊರು ಒಂದು ಮಾಡ್ಬಿಟ್ಟಾರು ರಂಪಾಟ ಹಚ್ಬಿಟ್ಟಾರು! ಏನೋ! ಲೋ! ಇನ್ ಕದೀತಿಯಾ. ಇಲ್ಲಾಂತನ್ನು! ಇನ್ ಕದ್ಯೋದಿಲ್ಲಾಂತನ್ನು! [ಎಂದು ಬಲವಾಗಿ ಕಿವಿ ಹಿಂಡುವಳು. ಹುಡುಗ 'ಅಯ್ಯೋ! ಅಯ್ಯೋ! ಅಯ್ಯೋ!' ಎಂದು ಕೂಗುವನು]

ಮಾರ್ಟಿ. ಹೋಗ್ಲಿ ಬಿಡಮ್ಮಾ! ಈ ಬಾರಿಗೆ ಬಿಟ್ಬಿಡು!

ಹೆಂಗ. ಬಿಟ್ ಬಿಡೋದೇ ಈ ಕಳ್ರನ್ನ! ಇಲ್ಲ ಈಗ್ಲೇ ಪೋಲೀಸ್ರನ್ನಾ ಕರ್ದು, ಒಪ್ಸೀಬಿಡ್ತೇನೆ ನಡೆ ಕುಳ್ಳ! [ಎಂದು ಹೊಡೆದು ಎಳೆಯುವಳು.]

ಹುಡುಗ. [ಅಳುತ್ತಾ ಬಾರದೆ] ನಾನೇನೂ ಹಣ್ ತೆಗೀಲಿಲ್ಲ. ನನ್ನ ಹತ್ರ ಎಲ್ಲಿದೆ ಹಣ್ಣು? ಇದೆಯೋ ನೋಡ್ಕೊಳ್ಳಿ! ಸುಮ್ನೇ ಯಾಕ್ ಹೊಡೀತೀರಾ ನೀವ್ ಹಿಂಗೆ! [ಅಳುತ್ತಾ] ಬಿಟ್ ಬಿಡ್ರೀ ನನ್ನ! ನಾ ಹೋಗ್ತೀನೀ! [ಕೈ ಕುಲುಕಿ, ಬಿಡಿಸಿಕೊಳ್ಳಲು ಯತ್ನಿಸುವನು.]

ಹೆಂಗ. [ಗಟ್ಟಿ ಕೈಹಿಡಿದು] ಏನೋ ತುಂಟಾ! ನನ್ನೊಡೇನೂ ಉಗ್ಡಾಡ್ತೀಯೇನೋ? ಮಾತಿಗೊಂದೇಟ್ ಹೊಡೆದ್ ಬಿಟ್ಟೇನ್ ಮತ್ತೆ? [ಕೆನ್ನೆಗೆ ಹೊಡೆಯಲು ಕೈ ಎತ್ತುವಳು]

ಮಾರ್ಟಿ. [ಕೈಯಿಂದ ತಡೆಯುತ್ತಾ] ಆಗದಮ್ಮಾ! ದೇವರಿಗಾಗಿ, ಈ ಬಾರಿ, ಅವನನ್ನ ಮನ್ನಿಸಿ ಬಿಟ್‌ಬಿಡ್ರಮ್ಮಾ! [ಅವರಿಬ್ಬರ ನಡುವೆ ಬಂದು ನಿಂತು ಬಿಡಿಸಲು ಹೋಗುವನು]

ಹೆಂಗ. ಬಿಟ್‌ಬಿಡೋದೇ! ಮುಂದಿನ ವರ್ಷದ ತನ್ಕ ಮರೀಬಾರ್ದು. ಹಾಗೆ ಮನ್ನಿಸಿ ಬಿಡ್ತೀನೀ! ಈಗ ನೋಡ್ಕೊಂಡಿರಿ. ಈ ಕತ್ತೆಯನ್ನಾ, ಈಗ್ಲೇ ಕರ್ಕೊಂಡ್ಹೋಗೀ, ಪೋಲೀಸ್ರಿಗೇ ಕೊಟ್ಬಿಡ್ತೀನೀ! [ಕೈ ಹಿಡಿದೆಳೆದು ಹೊರಡುವಳು]

ಹುಡುಗ. ಹು. ಹು. ಹು. [ಅಳುತ್ತಾ] ನಾನೇನೂ ಕದೀಲಿಲ್ಲ! ಹೂ... [ಕಣ್ಣು ತಿಕ್ಕುತ್ತಾ ಅಳುತ್ತಿರುವನು.]

ಮಾರ್ಟಿ. [ಹುಡುಗನ ಕೈ ಹಿಡಿದು ತಡೆದು] ಹೋಗ್ಲಿ ಬಿಟ್‌ಬಿಡ್ರಮ್ಮಾ ಈ ಬಾರಿ! ಇನ್ನು ಹೀಂಗ್ ಮಾಡಾಕ್ಕಿಲ್ಲ. ಯೇಸುಕ್ರಿಸ್ತರಿಗಾಗಿ, ಅವನನ್ನ ಬಿಟ್‌ಬಿಡ್ರಮ್ಮ!

ಹೆಂಗ. [ದೂಡಿ] ಹೋಗೋ ಮೂರ್ಖ! ಬದುಕ್ಕೋ ಈ ಬಾರಿ! [ಬಿಡುವಳು ಹುಡುಗನನ್ನು. ಅವನು ಓಡತೊಡಗುವನು. ಮಾರ್ಟಿನ್ ಓಡಿ ಹಿಡಿದು ತರುವನು]

ಮಾರ್ಟಿ. ಎಲ್ಲಿಗೋಡ್ತೀಯೋ ಕ್ಷಮೇ ಕೇಳ್ಕೋ ಈ ಅವ್ನೊಡ್ನೆ, 'ಇನ್ ನಾನ್ ಎಂದಿಗೂ ಕದಿಯಾಕಿಲ್ಲಾ' ಅಂತ.

ಹುಡುಗ. [ಅಳುತ್ತಾ] ನಾನೇನೂ ಕದೀಲಿಲ್ಲ. ನನ್ ಕೈಯಲ್ಲಿ ಹಣ್ಣಿಲ್ಲ. ನೋಡ್ರಿ, ಬೇಕಾದ್ರೆ! [ಕೈ ತೋರಿಸುತ್ತಾನೆ.]

ಮಾರ್ಟಿ. ಸುಳ್ಳು ಹೇಳ್ತೀಯೇನೋ ಕದೀಲಿಲಾಂತ! ಹಣ್ಣು ಕದಿಯೋದಕ್ಕೆ, ಕೈ ಕೊಟ್ಟಿದ್ದೀಯಾ ಬುಟ್ಟೀ ಮೇಲೆ. ನಾನೇ ಅಲ್ಲಿ ನೋಡ್ತಾ ಇದ್ದೆ. ನೀನು ಸುಳ್ಳು ಹೇಳೀ, ಈ ಅಮ್ನನ್ನಾ, ಸುಳ್ಳುಗಾತೀಂತ ಮಾಡೋದಕ್ಕೆ ಹವಣ್ಸ್ತೀಯೇನೋ? ಒಳ್ಳೇ ಅಮ್ಮಾ ಆಗೋತ್ತಿಗೇ, ನಿನ್ನನ್ನಾ ನನ್ ಮಾತಿನ ಮೇಲೆ ಬಿಟ್ ಬಿಟ್ರು! ಕೈ ಮುಗೀ! 'ಇನ್ ಕದ್ಯೋದಿಲ್ಲಾ! ಕ್ಷಮ್ಸೀ'

ಅಂತ, ಅಂದ್ಬಿಡು ಈ ಬಾಯಿಯಿಂದ. ಇಲ್ಲವಾದ್ರೆ. ನಿನ್ನನ್ನ ನಾನೇ ಬಿಡೋಹಾಗಿಲ್ಲ.

ಹುಡುಗ. ಹು...[ಅಳುತ್ತಾ] ಇಲ್ಲ; ಇನ್ನು ಎಂದ್ಗೂ ಕದಿಯಾಕಿಲ್ಲ. ಇನ್ನು ಯಾರ್ಗೂ ಹೀಗೆ ತೊಂದರೆ ಕೊಡಾಕಿಲ್ಲ. ಹು...

ಮಾರ್ಟಿ. 'ಕ್ಷಮಿಸ್ಸೀ' ಅನ್ನು!

ಹುಡುಗ. ಹು...ಕ್ಷಮಿಸಿ ಹು... [ಅಳುತ್ತಾನೆ.

ಮಾರ್ಟಿ. ಇದ್ ಸರಿ! ಹೀಗಿರ್‌ಬೇಕ್ಕಣೋ ಮುಂದಿನ ಮರಿಗಳು! ಇಕೋ! ಈ ಒಂದ್ ಹಣ್ಣನ್ನಿಸ್ಕೋ; ನಿನ್ಗೇ! [ಬುಟ್ಟಿಯಿಂದ ತೆಗೆದ್‌ಕೊಟ್ಟು] ತಕ್ಕೊಂಡ್ಹೋಗಿ ತಿನ್ನು! ಇನ್ನು ಹೀಗೆಲ್ಲಾ ತುಂಟತನ ಮಾಡ್ಬಾರ್ದು. [ಬೆನ್ನು ತಟ್ಟೀ] ನೀವೆಲ್ಲಾ ಒಳ್ಳೇ ಮಕ್ಳಾಗಿರ್ಬೇಕು. ಮತ್ತೊಬ್ರಿಗೆ ಉಪ್ಕಾರಾ ಮಾಡೋ ದೇವ್ರಂತಾ ಮಕ್ಳಾಗಿರ್ಬೇಕು. ಮತ್ತೊಬ್ರಿಗೆ ಅಪಕಾರಾ ಮಾಡೋ ಮಕ್ಳಾಗಿರ್ಬಾರ್ದು ತಿಳಿತೇನಪ್ಪಾ! [ಬೆನ್ನು ತಟ್ಟುತ್ತಾ] [ಹೆಂಗಸಿನೊಡನೆ] ಏನಮ್ಮ ಇದ್ರ ಹಣಾ ನಾ ಕೊಡ್ತೀನೀ!

ಹೆಂಗ. ನೀವೆಲ್ಲಾ ಹೀಗೆ ಈ ಕೋತಿಗಳ್ನಾ ಮತ್ತೂ ಕೆಡಿಸ್ತೀರಿ. ಇನ್ನು ಒಂದು ವಾರ ಏಳ್ಬಾರದಿತ್ತು ಹಾಗೆ ಇವನ ಕೈಕಾಲು ಮುರಿದ್ ಹಾಕಬೇಕಿತ್ತು. ಆಗ ಈ ಕೆಟ್ಟ ಬುದ್ಧೀ ಹೋಗೀ, ಒಳ್ಳೇ ಬುದ್ಧೀ ಬರ್ತಿತ್ತು! [ಮತ್ತೆ ಹೊಡೆಯಲು ಹೋಗುವಳು]

ಮಾರ್ಟಿ. [ತಡೆದು] ಆ! ಆ! ಆ! ಅಮ್ಮಾ ಹಾಗೆಲ್ಲಾ ಅನ್ಬಾರ್ದಮ್ಮಾ! ಅವೆಲ್ಲಾ ನಮ್ಗೇ, ನಮ್ ದೃಷ್ಟಿಗೇ ಸರಿ ಕಾಣ್ಬಹುದು. ಆದ್ರೆ ದೇವ್ರಿಗೇ, ಅವ್ರ ದೃಷ್ಟಿಗೇ ಸರಿ ಕಾಣ್ದಮ್ಮಾ! ಕದಿಯುವ ಪಾಪವನ್ನ ತಿಳಿಯದೆ ಅವುಗಳು ಮಾಡುತ್ತಾವೆ ಅಂತ, ಹೊಡೆಯುವ ಪಾಪವನ್ನು ತಿಳಿದೂ ನಾವು ಮಾಡುವುದೇ?

ಹೆಂಗ. ಏನೋ ಹೊಸಮಾತು ಮಾತಾಡ್ತೀರಲ್ಲಾ ನೀವು?

ಮಾರ್ಟಿ. ಇದು ಹೊಸತಲ್ಲವಮ್ಮಾ! ಎಲ್ಲಾದಕ್ಕೂ ಕ್ಷಮೆಯೇ ಮೂಲ! ಕ್ಷಮೆಯೇ ಮಾನವನನ್ನು ಸರಿ ದಾರಿಗೆ ತರುವಂತಹ ಸಾಧನ. ಆದ್ದರಿಂದ ಈ ಹುಡುಗ್ರು, ತಿಳಿಯದೆ ತಪ್ಪು ಮಾಡಿದ್ರೆ, ಅವು

ಗಳನ್ನು ಕ್ಷಮಿಸಿಯೇ, ಸರಿದಾರಿಗೆ ತರಬೇಕವ್ಮಾ ನಾವು? ದೇವರು 'ಕ್ಷಮಿಸಬೇಕು ಎಂದು ಆಜ್ಞೆಯಿತ್ತಿದ್ದಾರೆ. ಅವರೂ ನಮ್ಮನ್ನು ಕ್ಷಮಿಸುತ್ತಾರೆ. ಹಾಗೆಯೇ ನಾವೂ, ಎಲ್ಲರನ್ನೂ ಎಲ್ಲವನ್ನೂ ಕ್ಷಮಿಸಬೇಕು. ಕ್ಷಮೆಯೇ ಸಹನೆಯ ಮೂಲ. ಸಹನೆಯೇ ಮಾನವನಿಗೆ ದೇವಗುಣ. ಪ್ರತಿಯೊಬ್ಬರೂ ಕ್ಷಮಿಸಲ್ಪಡಬೇಕು. ಅದರಲ್ಲಿಯೂ ಇಂತಹ ಅರಿಯದ ಹಸುಳೆಗಳು. ಅವಶ್ಯವಾಗಿಯೂ ಕ್ಷಮಿಸಲ್ಪಡಬೇಕು.

ಹೆಂಗ. ಇವೆಲ್ಲಾ, ಹೇಳೋದಕ್ಕೆ ಮತ್ತು ಕೇಳೋದಕ್ಕೆ ಚಂದವಾದ ಮುತ್ತಿನಂತಾ, ಮುದ್ದಿನಂತಾ ಮಾತ್ಗಳ್ ಕಂಡ್ರೀ! ಆದ್ರೇ ಹೀಗೆ ಅವ್ರು ಮಾಡಿದ್ದನ್ನೆಲ್ಲಾ ಮಕ್ಳ್ಯಂತಾ ಕ್ಷಮಿಸಿ ಬಿಟ್ರೇ, ಅವ್ರು ಮನ ಬಂದ ಹಾಗೆ ಮಾಡೋ ಅನ್ಯಾಯಕ್ಕೆ ಮತ್ತೆ ಅಂಜುತ್ತಾರಿಯೇ? ಅದಕ್ಕೆ ನಾವೇ ಎಡೆಕೊಟ್ಟ ಹಾಗೆ. ಮತ್ತೆ ಕೇಳೋದೇ ಬೇಡ, ಅವು ಅನ್ಯಾಯಗಳನ್ನೆ ಅಲ್ಲ. ಅತ್ಯಾಚಾರಗಳನ್ನೂ.

ಮಾರ್ಟ. ಇಲ್ಲವಮ್ಮಾ! ನಾವು ಅದನ್ನ ಉಪದೇಶ ಮಾಡಿ, ಕ್ಷಮಿಸಿ ತಿಳಿಸುವುದರಿಂದ ಆಗುವ ಸತ್ ಪರಿಣಾಮ ಶಿಕ್ಷಿಸುವುದರಿಂದ ಆಗುವುದಿಲ್ಲ. ಶಿಕ್ಷಿಸುವುದೆಂದರೆ, ದ್ವೇಷ ಹಾಗೂ ಪ್ರತೀಕಾರ ಬುದ್ಧಿಗಳನ್ನು ಬೂದಿ ಮುಚ್ಚಿದ ಕೆಂಡದಂತೆ ಇರಿಸುವುದೆಂದರ್ಥ.

ಹೆಂಗ. ಏನಪ್ಪಾ! ನನಗೇನು ಮಕ್ಕ ಮೇಲೆ ಪ್ರೇಮ ಇಲ್ಲಾಂತ ತಿಳ್ಕೊಂಡ್ರಾ? ತುಂಬಾ ಮೊಮ್ಮಕ್ಕಳು ನನಗಿದ್ದಾರಪ್ಪಾ ಮನೆಯಲ್ಲಿ. ಅವ್ರೆಲ್ಲಾ ಎಷ್ಟು ಮುದ್ದು ಮುದ್ದಾಗಿ ಮಾತಾಡ್ತಾರೆ ಗೊತ್ತಿದೆಯೇ? ನನ್ನನ್ನು ತುಂಬಾ ಪ್ರಿತಿ ಮಾಡ್ತಾರಪ್ಪಾ! ನನ್ನ ಎಲ್ಲಾ ಕೆಲ್ಸದಲ್ಲೂ ನಂಗೆ ಸಹಾಯ ಮಾಡ್ತಾರೆ. ನನಗೊಂದಿಷ್ಟೂ ತೊಂದ್ರೆ ಕೊಡಾಕ್ಕಿಲ್ಲ. ಮಕ್ಳ್ಯಂದ್ರೆ, ಹಾಗಿರ್ ಬೇಕು. ಅದರ್ ಬದ್ಲು, ಹೀಗೆಲ್ಲಾ ಅವ್ರು ತುಂಟರಾಗಿದ್ರೆ, ದೊಡ್ಡವರೇ ಹೀಗೆ ಅವ್ರು ಮಾಡಿದ್ದನ್ನು ಕ್ಷಮ್ಸಿ, ಅವ್ರನ್ನು ಮತ್ತೂ ತುಂಟರನ್ನಾಗಿ ಮಾಡ್ಸಿದ್ರೆ ಹೇಗೆ ಅಂತ? ಈ ಹುಡುಗನ ಮೇಲೆ

ನನಗೇನು ದ್ವೇಷವೇ? ಇಲ್ಲವಪ್ಪಾ! ಈ ತುಂಟ ಗುಣದ ಮೇಲೆ ನಾನು ದ್ವೇಷಮಾಡ್ತಿದ್ದೇನೆ. ಇರಲಿ. [ಹುಡುಗನ ಬೆನ್ನು ತಟ್ಟಿ] ಹೋಗಪ್ಪಾ! ಇನ್ನು ಹೀಗೆ ತುಂಟನಾಗ್ಬೇಡ. ದೇವರು ನಿನ್ನನ್ನು ಒಳ್ಳೆದು ಮಾಡ್ಲಿ

[ಹರಸಿ, ಕಟ್ಟಿಗೆಯ ಕಟ್ಟನ್ನು ಕಟ್ಟಿ, ಹಣ್ಣಿನ ಬುಟ್ಟಿ, ಕಟ್ಟಿಗೆಯ ಹೊರೆ ಎರಡನ್ನೂ, ಕಷ್ಟದಿಂದ ಹೊತ್ತುಕೊಳ್ಳಲು ಹೋಗುವಳು]

ಹುಡುಗ. [ಕೂಡಲೇ ಹತ್ತಿರ ಬಂದು] ಅಮ್ಮಾ! ನೀನು ಒಳ್ಳೆಯ ದೊಡ್ಡಮ್ಮನಮ್ಮ! ಇವೆರಡನ್ನೂ ನಿನಗೆ ಹೊತ್ಕೊಳ್ಳೋದಕ್ಕೆ ಆಗೋದಿಲ್ಲ. ಹಣ್ಣಿನ ಬುಟ್ಟಿ ನೀನೇ ಹೊತ್ಕೋ! ಕಟ್ಟಿಗೆಯ ಹೊರೆ, ನಾನು ಹೊತ್ತು ತಂದು, ನಿನಗೆ ಉಪಕಾರ ಮಾಡ್ತೇನೆ.

ಹೆಂಗ. ಅಯ್ಯೋ, ನನ್ನ ಮುದ್ದಿನ ಪೋರಾ! [ಎಂದು ಮುದ್ದಿನಿಂದ ಗಲ್ಲ ಚಿವುಟಿ] ಆಗಲಿ! ಬಾ! ಬಾ! ನಮ್ಮ ಮನೆಗೇ ಬಾ! ನಮ್ಮ ಒಳ್ಳೇ ಮಕ್ಳನ್ನಾ ನಿನಗೆ ತೋರಿಸುತ್ತೇನೆ. ಅಲ್ಲಿ ನಿನಗೆ ಒಳ್ಳೇ ಹಣ್ಣು ಕೊಡ್ತೇನೇ. ಹೀಗೆ ಉಪಕಾರಾ ಮಾಡೋ ಬುದ್ಧಿ ಬರ್ಬೇಕಪ್ಪಾ ನಿಂಗೇ

ಹುಡುಗ. ಹೂ ಅಜ್ಜೀ! ನಂಗೂ ಒಬ್ಳು ಅಜ್ಜಿ ಇದ್ದಾಳೆ. ನಾನೂ ಅವ್ಳನ್ನ ತುಂಬಾ ಪ್ರೀತಿ ಮಾಡ್ತೀನೀ ಅಜ್ಜಿ. ನಾನು ಅವಳೊಡನೆ ಯಾವಾಗಲೂ ಹೀಗೆಯೇ ತುಂಟತನ ಮಾಡ್ತಿದ್ದೇನೆ. ಅವಳಿಗೆ ಬಹಳ ಸಂತೋಷವಾಗಿ ಇಡೀ ಹಲ್ಲಿಲ್ಲದ ಬಾಯಿ ಬಿಟ್ಬಿಡ್ತಾಳೆ! ನಗುತ್ತಾ 'ಹೇಡಿ' ಅಂತಾಳೆ! ತುಂಟ ಅಂತ ಬೈತಾಳೆ! ಥೂ ಮುಟ್ಬ್ಯಾಳ ಅಂತ ಹೊಡೀತ್ತಾಳೆ! ನಂಗೂ ಆಗ, ಬಹಳ ಸಂತೋಷವಾಗುತ್ತೆ, ನನ್ನ ಹೊಸ ಅಜ್ಜೀ! ಹಾಗೆಯೇ ತಿಳ್ಕೊಂಡು, ನಿನ್ನ ಹತ್ರಾನೂ ತುಂಟತನ ಮಾಡ್ದೇ ಅಜ್ಜೀ!

ಹೆಂಗ. ಅಯ್ಯೋ ಮಗೂ! [ಗಲ್ಲಮುಟ್ಟಿ ಮುದ್ದಿನಿಂದ] ಹಾಗಾದ್ರೆ, ಅಜ್ಜೀ ಸಾಕ್ತಾ ಮಗ್ನೇನಪ್ಪಾ ನೀನು? ಒಳ್ಳೇದು! ಬಾ! ಬಾ! ಹೋಗೋಣ! [ಇಬ್ಬರೂ ಹೋಗುವರು, ಎಡಬದಿ ಮಾರ್ಟಿನ್

ಅವರ ಮಾತನ್ನು ಆಲಿಸುತ್ತಾ ಸಂತೋಷದಿಂದ]

ಮಾರ್ಟಿ. ಈಗ ಸರಿ! ಈ ಕ್ಷಮೆ ಈ ಪ್ರೇಮವನ್ನುಂಟುಮಾಡಿತು. ಕದಿಯುವ ದುರ್ಬುದ್ಧಿಯನ್ನು ನೀಗಿಸಿ, ಉಪಕಾರ ಮಾಡುವ ಸದ್ಬುದ್ಧಿಯನ್ನೀಯಿತು ಆ ದಿವ್ಯವಾಣಿ. ಆ ದೇವ ವಾಣಿ ಇದನ್ನೇ ಹೇಳುತ್ತದೆ. [ಜ್ಞಾಪಿಸಿಕೊಂಡು] ಓ ಆ ಹಣ್ಣಿನ ಹಣ ಕೊಡಲು ಮರೆತೆ! [ಓಡಿ ಎಡಕ್ಕೆ] ಓ ಅಮ್ಮಾ! ಇಕೋ! ಹಣ್ಣಿನ ಹಣ! [ಎಂದು ಕರೆದು ಹೇಳುತ್ತಾ, ಮತ್ತೆ ಕೇಳಿದಂತೆ ಕಿವಿಯಲ್ಲಿ ಮಾಡಿ] ಏನು? ಬೇಡವೇ? ನನಗೇನು? [ಮೇಲೆ ನೋಡಿ] ಓ! ಹೊತ್ತಾಯಿತು. ಆ ಮೆಟ್ಟನ್ನು ಕೊಂಡುಹೋಗುವುದಕ್ಕೆ ಅದರ ಯಜಮಾನರು ಬರುವ ಹೊತ್ತಾಯಿತು. ಬೇಗನೇ ಸರಿ ಮಾಡಿಡ್ತೇನೆ. [ಹೋಗಿ ಕುಳಿತು ಸರಿ ಮಾಡಿ] ಸರಿ! ಸಿದ್ಧವಾಯಿತು. ಇನ್ನು ಯಾವಾಗಬೇಕಾದರೂ ಬರಲಿ. [ಇಣಿಕಿ ನೋಡಿ] ಇದೇನು? ಆಗಿಂದ ದಾರಿ ನೋಡ್ತಿದ್ದೇನೆ. ಯಾರೂ ಬರ್ಲಿಲ್ಲ. ಹಾಗಾದರೆ ನಿನ್ನೆ ಹೇಳಿದ ಮಾತು ಸುಳ್ಳೇ! ಅಥವಾ ಕನಸ್ಸೇ! ಏನೋ! ನಿನ್ನೆಗಿಂತ ಮುಂದೆ ಮತ್ತೆ ಓದಿ, ಇನ್ನೇನಿದೆ ಎಂದು ತಿಳಿದುಕೊಳ್ಳುತ್ತೇನೆ. [ಓದತೊಡಗುತ್ತಾನೆ] ಒಂದು ಧ್ವನಿ ಕೇಳಿಸುತ್ತದೆ.]

"ಮಾರ್ಟಿನ್! ಮಾರ್ಟಿನ್! ನಾನು ಯಾರು ಅಂತ ತಿಳೀಲಿಲ್ವೇ?"

ಮಾರ್ಟಿ. [ಈ ಧ್ವನಿಯನ್ನು ಕೇಳಿ ಬೆಚ್ಚಿಬಿದ್ದು] ಆ! ಯಾರಿದು? ಮತ್ತೆ ಅದೇ ರೀತಿಯ ಧ್ವನಿ! [ಎದ್ದು] ಯಾರು? ಎಲ್ಲಿ ಇದನ್ನು ಹೇಳುತ್ತಿರುವುದು? [ಸುತ್ತ ನೋಡುತ್ತಾ, ಬಲ ಬದಿ ಸರಿದು ಬರುತ್ತಾನೆ]

ಸ್ಟೆಫ. [ಬಲಬದಿ ಹಿಂದಿನಿಂದ ಪ್ರವೇಶಿಸಿ, ಮಾರ್ಟಿನನ್ನು ನೋಡಿ ಎಡಕ್ಕೆ ಸರಿಯುತ್ತಾ]

ಹಸಿದಿದ್ದೆ ನಾನು ಕರೆ ಕರೆದು ಉಣಿಸಿದೆ
ಬಾಯಾರಿದೆನ್ನನೂ ಕುಡಿ ಕುಡಿಸಿ ತಣಿಸಿದೆ
ಅಪರಿಚಿತನಾದೆನ್ನನೊಳಬರಿಸಿ ಉಪಚಾರಗೈದೇ
ನಾನಿದನೆಂತು ಮರೆವೆ? ಇಲ್ಲ! ಮರೆಯೆ!

[ಎನ್ನುತ್ತಾ ನೇರವಾಗಿ ಹೋಗುವನು ಎಡಕ್ಕೆ ಮಾರ್ಟಿನ್ ಕಕ್ಕುಬಿಕ್ಕಾಗಿ ನೋಡುತ್ತಿರುವನು]

ಹೆಂಗ. [ಅದೇ ಹಿಂದಿನ ವೇಷದಿಂದ, ಬಲಬದಿ ಹಿಂದಿನಿಂದ ಪ್ರವೇಶಿಸಿ ಮಾರ್ಟಿನನ್ನು ನೋಡಿ ಎಡಕ್ಕೆ ಸರಿಯುತ್ತಾ]

ಅರಿಯುದ ಜ್ಞಾನಿಗೆ ಕ್ಷಮೆಯು ಮಹಾ
ಮಂತ್ರವನ್ನರುಹಿದ್ಯೆ ನೀನೆನ್ನನರಿತೈ

[ಎನ್ನುತ್ತಾ ನೇರವಾಗಿ ಎಡಕ್ಕೆ ಹೋಗುವಳು. ಮಾರ್ಟಿನ್ನನು ಕಕ್ಕುಬಿಕ್ಕಾಗಿ ನೋಡುತ್ತಿರುವನು]

ಹುಡುಗ. ಅದೇ ಹಿಂದಿನ ರೀತಿಯಿಂದ ಬಲಬದಿ ಹಿಂದಿನಿಂದ ಪ್ರವೇಶಿಸಿ ಮಾರ್ಟಿನನ್ನು ನೋಡಿ ಎಡಕ್ಕೆ ಸರಿಯುತ್ತಾ]

ಪ್ರೇಮವೇ ಪರಮಾತ್ಮನೆಂಬ ಸುಜ್ಞಾನವನು
ಜನತೆ ನೀ ಬೋಧಿಸಿದೆ ಎನ್ನ ನೀತಿಯನರಿತೆ

[ಎನ್ನುತ್ತಾ ನೇರವಾಗಿ ಎಡಕ್ಕೆ ಹೋಗುವನು. ಮಾರ್ಟಿನ್ನನು ಕಕ್ಕುಬಿಕ್ಕಾಗಿ ನೋಡುತ್ತಿರುತ್ತಾನೆ.]

ಮಾರ್ಟಿ. [ಅವರೇ ದೇವರು ಎಂಬುದನ್ನು ತಿಳಿದು, ಅಲ್ಲಿಯೇ ಮೊಣಕಾಲೂರಿ ಕುಳಿತು ಕೈನೀಡಿ] ದೇವಾ! ಈ ದೀನನನ್ನು ಧನ್ಯನನ್ನಾಗಿ ಮಾಡಿದೆ.

[ಒಳಗಿಂದ ಒಂದು ಧ್ವನಿ ಕೇಳಿಬರುತ್ತದೆ. ಅದನ್ನು ಆಲಿಸುತ್ತಾನೆ. ಅಥವಾ ಯೇಸು ಕ್ರಿಸ್ತರು ಅಲ್ಲಿ ಕಾಣಿಸಿಕೊಂಡು ದೂರದಲ್ಲಿ ಎತ್ತರದಲ್ಲಿ ಹೇಳಿದರೂ ಆಗಬಹುದು.

[ಧ್ವನಿ]

ಆರ್ತರಿಗೆ ಗೈವ ಉಪಚಾರವೇ
ಎನಗೆ ನೀ ಗೈವ ಅತ್ಯುಪಚಾರ
ದೀನರಿಗೆ ಗೈವ ಉಪಕಾರವೇ
ಎನಗೆ ನೀ ಗೈವ ಬಲು ಉಪಕಾರ
ನಾನು—ದೀನನು ಬೇರೆ ಎಂದಿಲ್ಲ
ದೀನರಲಿ ನಾನಿರುವೆ, ದೀನರನು

ನೀ ಪೊರೆವೆ ಅದಕಾಗಿ ನೀನು ಜೀ
ವಿಸುತಿರುವೆ ಇದ ನಾನಪೇಕ್ಷಿಸು
ತ್ತಿರುವೆ ಅದರಿಂದ ನೀನುದ್ಧಾರ
ವಾಗುತಿಹೆ ಜಗದ ಉದ್ಧಾರವಿದೆ.

ಮಾರ್ಟ. ನಮೋ! ನಮೋ! ಶರಣು ಶರಣು!

[ಕೈಗಳನ್ನು ಎದೆಯ ಮೇಲಿಟ್ಟುಕೊಂಡು ಭಕ್ತಿಯಿಂದ ತಲೆತಗ್ಗಿಸುವನು.
ಪರದೆ ಬೀಳುವುದು]



## ಓರ್ವನು ಬಂದು

ಧಸಸಸ ಸಾಸಾ ಧಸಸಸ ಸರಿರಿಗ
ಓರ್ವನು ಬಂದು ಕೆನ್ನೆಗೆ ಒಂದು

ಗಗಗಗ ಗಾಗರಿ ಗಪಗಮ ಗಮಗರಿ ಸಾ
ಹೊಡೆದರಿ ತಿಂದು. ಸಹನೆಯ ತ...ಂದು

ಸರಿಗರಿ ರೀರೀ ಗಪಪಮ ಗಮಗರಿ ಸಾ ।
ಕೊಡುವ ತೆರ್ತಂದು ಕೆನ್ನೆಯ ಮು...ಂದು ।

ಗಗಮಮ ಗಾಮಾ ಗಾಮಗ ರಿಗಮಗ ರೀ
ಹೊಡೆವವ ನಂದು ತಪ್ಪಿತು ಎಂ...ದು

ರಿರಿರೀ ರೀರೀ ರಿಗರಿಸ ಧಸರೀ ।
ಬಳಿಗೈ ತಂದು ಎರಗುವ ನೊಂದು ।

ಗಾಪಪ ಗಪಪಪ ಗಮಮಗ ಗಮಗಗ
ದ್ವೇಷದಿ ದ್ವೆ ಷವ ರೋ ಷದಿ ರೋಷವ

ಗಮಗರಿ ರಿಗರಿರಿ ರಿಗರಿಸ ಧಸರಿರಿ
ದೋ. ಷದಿ ದೂ.ಷವ ಎದುರಿಪೆ ನೆ.ಂಬುವ

ಗಗಪಾ ಗಪಪಪ ಧನಿಧಪ ಧನಿಧಧ
ಮನಕು ದ್ರೇ.ಕವ ಕೊಡಿಸುವ ಕೆಡಿಸುವ

ಗಸಪ,ಗ ಪಪಪಪ ಗಪಧಪ ಗಾರಿರಿ ।
ಮಿದುಳಕೆ ರಳಿಸುವ ಕೃತಿಕೈ. ಕೊಳ್ಳುವ ।

ಸಾಮಮ ಗಗಮಾ ಗಗಮಗ ರಿಗಮಗ ರಿರಿ
ಮಾನವ ನಲಿ.ದಾ ನವತೆಯ ತುಂ. ಬುವ

ಗಾಪಗ ಗಪಧಧ ಪಾಗಗ ರಿಗಮಗ ರಿರಿ ।
ಪಾಪವ ತೊರೆಲಿರಿ ಈಉಪ ದೇ.....ಶವ ।

ಗಪಧನಿ ಧಪಧಧ ಗಗಗಮ ಗರಿರಿಗ
ಅನೃತವ ಸ. ತ್ಯದಿ ಹಗೆಯನು ಪ್ರೇ.ಮದಿ

ಗಗಗಗ ಗರಿರಿರಿ ರಿಗರಿಸ ಧಸರಿರಿ
ಬಲವನು ವಿನಯದಿ ಕ್ಲೇ.ಶವ ಹರುಷದಿ

ಸರಿಸಗ ರೀರಿರಿ ಸರಿಸಗರೀರಿರಿ ಸರಿಸಗರಿರಿರೀ
ಜಯಿಸುವ ಕಾರ್ಯದಿ ಇರುವವಿವೇಕದಿ ನಡೆಅನುದಿನವೀ

ಸರಿಸಗ ರೀರಿರಿ ರೀರಿರಿ ಸರಿಗರಿ ಸಧ
ಜಯಿಸುವ ಕಾರ್ಯದಿ ಶಾಂತಿವಿ ಧ....ನದಿ

ರಿಮಗಸ ರಿಮಗಸ ರಿಮಗರಿ ರಿರಿರೀ ।
ಇದೆಇ. ಮ. ನವ ತೆಯಜಯ ನಿಜದೀ ।

ಗಾಮಮ ಗಮಮಾ ಗಗಮಗ ರಿಗಮಗ ರೀ
ಮಾನವ ಗುಣವಾ ಮೆರೆಸುವ ತೆ. ರ. ವಾ

ಗಗಪಪ ಗಪಧಧ ಗಗಮಗ ರಿಗಮಗ ರಿರಿ।
ತಿಳಿಯುವ ಯ. ತ್ನದಿ ಇರುಜ. ಮ......ನವ।

[ ರಿ. ಗ. ಮ. ಧ. ನಿ. ]
[ 2 2 1 2 1 ]

## ಬಂದು ಕೇಳಿದರೆ

ಸನಿರಿಸ ಸನಿಧನಿ ಸಾಗರಿ ಗಪಮುಮು ।
ಬಂದುಕೇ. ಳಿದರೆ ಇದ್ದರೆ ಕೊಡುತಿರು ।

ಧಾಪಧ ನೀಧಪ ಮಾಗರಿ ಗಪಮುಮು ।
ಕೊಟ್ಟುದ ನೆಂದಿಗು ಹಿಂದೆಕೆ ಎಳದಿರು ।

ಸನಿರಿಸ ಸನಿಧನಿ ಸಾಗರಿ ಗಪಮುಮು ।
ದ. ತ್ತ್ರಪಹ.ದಿ ದೋಷತ. ರದಿರು

ಗಮುಧನಿ ಸನಿಸಸ ಸಾಸ,ನಿಸ ನಿರಿಸನಿಧ ।
ನಿ. ನ್ನೊಡ ನೆ. ಲ್ಲರು ಎಂತು,ವ...ರ್ತಿಪುದ ।

ಪಧಸರಿ ಗರಿಸಾ ನಿಸನಿಸ ನಿಸರಿಸ ನಿಧ ।
ನೀ, ನೆಳ ಸುವೆಯೊ ಅವರೊಡ ನೆ. ಯು. ಅದ ।

ಧಾಪಧ ನಿನಿಧಪ ಮಾಗರಿ ಗಪಮುಮು ।
ವರ್ತಿಸಿ ನಡೆವುದು ನೀತಿಯು ತಿಳಿಇದ ।

[ ರಿ. ಗ. ಮು. ಧ. ನಿ. ನಿ. ]
[ 2 2 1 2 1 2 ]

## ಗಡಿಯೂರ

ಸರಿಧಸ ಗಾ; ಗಮುರಿಗ ಸಾ;
ಗಡಿಯ. ರಾ, ಅಪಹ. ರಾ.

ಪಧಗಪ ಸಾ; ಸಾಸರಿ ಧಸನಿಧ
ಅಪಚಿ. ರಾ. ಗೈವನ ಬೈ.ಯ್ಯದೆ

ಪನಿಧಪ ಮಧಪಮ ಗಪಮಗ ರಿಮಗರಿ ।
ಹಿಡಿಯದೆ ಹೊಡೆಯದೆ ಬಡೆಯದೆ ತಡೆಯದೆ ।

ಸರಿಸಾ,ನಿಸನೀ ಧಾನಿಧ,ಪಾದಪ ಮಾ; ಧನಿಧಾಪಧಪಾ
ಕರಿದೂ ತೆಗೆದೂ ನಿನ್ನಯ ಅಂಗಿಯ ನೂ. ಒಗೆದೂ ಒರೆದೂ

ಮಪಮಾಗಮಗಾ ರೀ; ಪಧಪಾಮಪಮಾ ಗಮಗರಿಸರಿಧಸ।
ಉಪಯೋಗಿಸುಎಂ ದೂ. ಪೊರೆದೂ ಹಿರಿದೂ ಸಂತೈಸು
ವುದದು ।

ಗಾ,ರಿ ಗಮಪಧ ಪಾ; ;ಪಧ
ಕ.ದ್ದ ದನುಅವ ಗೇ..ಕೈ.

ಮಪಮಧ ಪಧಮಪ ಗಮಗರಿ ಸರಿಧಸ
ನಿ. ಡಿ.ದ .ನವನು ಇ.ತ್ತು ಹ ರಸುವುದು

ಗಾ,ರಿ ಗಮಪಧ ಪಾ; ;ಪಧ
ನೀ.ತಿ ನೀ.ತಿಳಿ ಯ್ಯೆ . ಅವ

ಪಸನಿಧ ಪಧಮಗ ರಿಮಗರಿ ಸರಿಧಸ
ನ.ಶಿಯು ಪ್ರಬಲಿಸೆ ಲೊ.ಭವು ಪ್ರಖರಿಸೆ

ಗಾ?ರಿ ಗಮಪಧ ಗಮಪ,ಗ ಮಪ,ಗಮ
ಬೇಕು ಎಂದರೆ ಕೊಡರು, ಎನುವ,ಅಪ

ಪಮಗರಿ ಸನಿಧನಿ ಸಗರಿಗ ಸಾ;

ನಂಬಿಕೆ ದು.ರ್ಭ. ವವಮೆರಿ ಸೇ.

ಪನಿಧನಿ ಧನಿಪಾ ;ರಿಗ ರಿಮಗರಿ

ಲಾ.ಭವ ಗಳಿಸೇ . ಕಾ. ರ್ಯಕೆಇಳಿ

ಸಾ; ;ಸಾ ಸನಿಧಪ ಮಗರಿಸ ।

ಸೇ . . ಈ ಅನಿ. ತಿ. ಗೈ.ವನು ।

ಸರೀಮ ಗರಿಧನಿ ಸನಿಸಾ ;ಸಾ

ಉದಾರ ದಿಂದಲಿ ತಡೆಯೋ . ಅ

ಸರೀಮ ಗರಿಧನಿ ಸನಿಸಾ ;ಪಾ

ನುಪಾಯದಿಂದಲಿ ತಡೆಯೋ . ಅ

ಪಧಧಸ ಸನಿನಿಧ ಪಧಪನಿ ಧಪಪಧ

ದು. ರ್ಭ. ವವು,ಸ. ದ್ಭ.ವದಿ ಬದಲಿಸಿ

ಮಪಮಧ ಪಧಮಪ ಗಮಗರಿ ಸರಿಧಸ ।

ಪ. ಶ್ಚ. ತ್ತಾ. ಪದಿ ಸ. ಭ್ಯನ .ಗುವನು ।

[ರಿ. ಗ. ಗ. ಮ. ಧ. ನಿ. ನಿ.]

[2 1 2 1 2 1 2]

ತಕ್ಕ ಕಥಾನಕವನ್ನು ಸೂಚಿಸಿ ಉಪಕರಿಸಿದ, ನಮ್ಮ ಶಾಲಾ ಪ್ರಾಧ್ಯಾಪಿಕೆಯರಾದ ರಿವರೆಂಡ್ ಮದರ್ 'ಮಕ್ರೀನಾ' M. Ed. B. T. (B. S.) ಅವರಿಗೂ, ತಕ್ಕ ಮುಖಚಿತ್ರವನ್ನು ಸೂಚಿಸಿ ಉಪಕರಿಸಿದ, ಉಪ ಉಚ್ಚ ಅಧ್ಯಾಪಿಕೆ ರಿವರೆಂಡ್ ಸಿಸ್ಟರ್ 'ವಯೋಲಾ' B. A., B. T. (B. S.) ಅವರಿಗೂ ನಾನು ಚಿರಋಣಿಯಾಗಿದ್ದೇನೆ.



## 'ಜಯಂತ ಶ್ರೀ' ರಾಗ ಆದಿತಾಳೆ.

(ಮರುಗೇಲರಾ, ಎಂಬಂತೆ)

### ಸೈಮನನೆ ನೀ

; ? ಧ ಮ,ಗ ಪಮ । ಗಸ ?ನಿ ಸಸ ಗಮ ।

. . ಸೈ . ಮ ನನೆ । ನಿ. .ನೊ.ಡಿ ವಳ ।
ಸಾ ?, ಧಮ,ಗಮ ಪಮ । ಗಸ ? ಸನಿ ಸ,ಸಗ ಗಮ ।
ನೂ . ಸೈ . ಮ. ನನೆ । ನಿ . .ನೊ ೀಡಿ. ವಳ
ಧಾನಿಸ· ?ನಿ,ಧ ಮ,ಗಮ ಪಮ । ಗಮಗ,ಸ ಗಸ,ಸನಿ ಸ,ಸಗ ಗಮ ।
ನೂ . . .,ಸೈ . ಮ. ನನೆ । ನಿ . . . . . ನೊ . . ಡಿ. ವಳ ।

ಧನಿಸಗ ಸನಿ,ಧ ಮ,ಗಮ ಪಮ । ಗಸ ?ಸನಿ ಸ,ನಿಧನಿ ।

ನು . . . . . , ಸೈ . ಮ . ನನೆ । ನಿ, . ನೊ . . ಡಿ ವಳ ।
ಸಾ ,
ನೂ . (ಪಲ್ಲವಿ)

ಧ ?ಧ ?ಧ । ಧನೀಧ ಮ,ಪ ಧಸ ಸನಿ ।
ಕ .ಣ್ಣಿ.ರಿ ! ನಿ . ಂದ . ಪ ದ, ತೊಳೆವ ।

ಧನಿನಿಸ ,ಸನಿ ನಿಧ,ಧ ೀಧ । ಧನಿಸ,ನಿಧಮ, ಪ ಧಸ ಸನಿ ।
ಅಂದ. .ಕ. . .ಣ್ಣಿ .ರಿ। ನಿ..ಂದ . . ಪ ದ ತೊಳೆವ ।

ಧನಿನಿಸ ?ಸನಿ ನಿಧ,ಧನಿ ಧನಿಸನಿ । ಧನಿಸ,ನಿಧಮ,ಪ ಧಸ ಸನಿ।
ಅಂದ. .ಕ. . . ಣ್ಣಿ. ..ರಿ. । ನಿಂ.ದ .. ಪ ದ ತೊಳೆವ।

ಧನಿಸಗ ಸ,ಗ ಗಗ ?ಗ । ಸಗಮಗ ಗಸ,ಸ ನಿ,ನಿಸ ಗಸ ।
ಅಂದ . .ಕ ಲೆಕು . ದ । ಲಿಂ . . ದ., ಒರೆ,ಸು. ವಳು ।

ನಿಧನೀ ಧ
ಚಂದ . (ಅನುಪಲ್ಲವಿ)
(ಮಾರುಗೇಲರಾ)
; ? ಪ ಪ,ಪ ಪಮ । ಮಪಮಾ ?ಗ ಗಗ ?ಸ।
ನಿ . ನ್ನೆ ಡೆಗೆ । ಬಂಡೆ .ಜ ಲಕೊಂದು ।
ಗಮಗಸ ?ಸನಿ, ಸಾ,ಸಗ ಗಗ । ಮಗಸಾ ?ಸನಿ ಸಗ ?ಗ।

ಕುಂದೆ. . ಕೊ ಡದಿ. .ರ್ದೆ। ಮುಂದೇ .ಬ. ಲುಗ.ರ್ವ।
ಮಾಮ ?
ದಿಂದೆ . (ಚರಣ)
'ಈ ಪಾದ ನಿನಗೆ' – ಅನುಪಲ್ಲವಿಯಂತೆ.
'ಸವರಲಿಲ್ಲ ತಲೆಗೆ' – ಚರಣದಂತೆ.
'ಎನ್ನನಿಂತು ಕರೆವ' – ಅನುಪಲ್ಲವಿಯಂತೆ.
[ಗ. ಮ. ಧ. ನಿ.]
[1 1 1 1]

## ತಪ್ಪು—ಒಪ್ಪುಗಳು

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ಮುನ್ನುಡಿ | 16 | ಸಾವಮಾಜಿಕದ | ಸಾಮಾಜಿಕರ |
| ನಿವೇದನೆ | 6 | ಎಲ್ಲಡೆಯಲ್ಲೂ | ಎಲ್ಲೆಡೆಯಲ್ಲೂ |
| 8 | 17 | ನನ್ನಪ್ರಣೆಯೋ? | ನಿನ್ನಪ್ರಣೆಯೋ? |
| 14 | 4 | ಎರೆಯು | ಎರೆಯೋ |
| | 15 | ಎನ್ನೆಡೆಗೆ | ಎನ್ನೆಡೆಗೂ |
| | 16 | ನಜವಾಗಿಯೂ | ನಿಜವಾಗಿಯೂ |
| 15 | 9 | ಕೊಳ್ಳುತ್ತಾೀನೆ | ಕೊಳ್ಳುತ್ತಾನೆ |
| | 11 | ಬ್ರಶ್ಶನ್ನು | ಬ್ರಷ್ಷನ್ನು |
| 17 | 25 | ನಾನು | — |
| 18 | 23 | ಒಡಯಾ | ಒಡೆಯಾ |
| | | ಅನ್ನುವೆಯಾ | ಅನ್ನುವೆಯೊ |

| | | | |
|---|---|---|---|
| 20 | 2 | ಕೊಂಡ್ಕೊಳ್ಳೀ | ಕೊಂಡ್ಕೊಳ್ರೀ |
| | 16 | ದೊಡ್ಮನ್ಸಿಲ್ದಾ | ದೊಡ್ಮನ್ಸ್ರಿಲ್ವಾ |
| | | ಕೊಂಡ್ಕೊಳ್ಳ್ಯಾಕಿಲ್ಲ | ಕೊಂಡ್ಕೊಳ್ಳ್ಯಾಕಿಲ್ಲ |
| | 19 | ಬದಲಿಸ್ತಿನ್ರೀ | ಬದಲಿಸ್ತೀನ್ರೀ |
| | 26 | ಬಂದ್ರೇನೋ | ಬಂದ್ರೇನ್ರೋ |
| 21 | 10 | ಹು | — |
| | 21 | ಪೋಲೀಸ್ರನಾ | ಪೋಲೀಸ್ರನ್ನಾ |
| | 26 | ಹಿಂಗೆ | ಹೀಂಗೆ |
| 22 | 13 | ಬಿಡ್ರಮಾ | ಬಿಡ್ರಮ್ಮಾ |
| 24 | 13 | ಅವು | ಅವುಗಳ |
| 25 | 19 | ಮಾಡ್ತಿದ್ದೇನೆ | ಮಾಡ್ತಿರ್ತೇನೆ |
| 27 | 5 | ಜ್ಞಾನಿಗೆ | ಜ್ಞಾನಿಗೀ |
| | 12 | ಜನತೆ | ಜನಕೆ |
| 29 | 20 | ರಿಗಮಗ | ರಿಗಮಃಗ |
| 31 | 2 | ಸನಿರಿಸ | ಸನಿರಿಸ |
| | 6 | ಸನಿರಿಸ | ಸನಿರಿಸ |
| | 8 | ಸನಿಸಸ | ಸನಿಸಸ |
| | | ನಿಸನಿರಿಸನಿದ | ನಿಸನಿರಿಸನಿಧ |
| | 10 | ನಿಸ ನಿಸ ನಿಸರಿಸ | ನಿಸ ನಿಸ ನಿಸರಿಸ |
| 32 | 15 | ಪಸನಿಧ | ಪಸನಿಧ |
| | 17 | ಗಾ ? ರಿ | ಗಾ,ರಿ |

## ಪಾತ್ರ ಪರಿಚಯ

1. ಮಾರ್ಟಿನ್: ... .. ಸಮಗಾರ.
2. ಸ್ಟೆಫನ್ .. .. ಸುಣ್ಣ ಬಳಿಯುವ ಮುದುಕ
3. ಹೆಂಗಸು .. .. ಹಣ್ಣು ಮಾರುವವಳು
4. ಹುಡುಗ .. .. ಹಣ್ಣು ಕದಿಯುವವನು
5. ಆಗಂತುಕರಿಬ್ಬರು .. ಚರ್ಚಿಗೆ ತೆರಳುವವರು



## ಈ ಲೇಖಕರಿಂದ ರಚಿತವಾದ ಕೃತಿಗಳು

1) 'ಮಕ್ಕಳ ಹಾಡುಗಳು' } 'ಪ್ರಭಾತ' ದವರ ಒಂದಾಣೆ ಮಾಲೆಯಲ್ಲಿ
2) 'ಗಾನ ಕುಸುಮ' } ಪ್ರಕಟವಾಗಿರುತ್ತದೆ.
3) 'ದಂತ ಧಾವನ'— (ಸಂಗೀತ ಸ್ವರ ಸಾಹಿತ್ಯಸಹಿತ ಒಂದು ಗೀತಾ ನಾಟಕ)
4) 'ರಾಯರ ಜೈಲು ವಾಸ ಅಲ್ಲಿ ಅವರ ಉಪವಾಸ' ('ಸರದಾರ ಸಾಹಿತ್ಯ ಮಾಲೆ'ಯ 'ಸುಗಂಧ ಪುಷ್ಪ' ಕಥಾಸಂಕಲನದಲ್ಲಿ)

## ಅಚ್ಚುಗೊಳ್ಳುತ್ತಿರುವ ಕೃತಿಗಳು

1) ಕೆಲವು ಲಲಿತ ಕವನಗಳು (ಸ್ವರ-ಸಾಹಿತ್ಯ ಸಹಿತ)
2) 'ಆದಿಕವಿ' — ವಾಲ್ಮೀಕಿಯ ಕುರಿತಾದ ಕೆಲವು ಸುಂದರ ಕಥಾ ಚಿತ್ರಗಳು. (ಪ್ರಭಾತದಲ್ಲಿ ಪ್ರಕಟವಾಗಿರುತ್ತದೆ).

## ಅಚ್ಚುಗೊಳ್ಳಲಿರುವ ಕೃತಿಗಳು

1. 'ಸಾಮಾಜಿಕ ಕತೆಗಳು' — (5 ಚಿಕ್ಕ ಕತೆಗಳ ಸಂಕಲನ)
2. 'ಕ್ಷಮೆಯೇ ಪ್ರೇಮದ ಮೂಲ'— (5 ದೃಶ್ಯಗಳ ಏಕಾಂಕ ನಾಟಕ)
3. ಕೆಲವು ಕಥಾ ದೃಶ್ಯಗಳು — (ಕ್ರೈಸ್ತಪಂಥದ 5 ಕತೆಗಳು ಸಂಗೀತ ಸಹಿತ ದೃಶ್ಯಗಳು)

4) 'ಭಾರತದ ಭವ್ಯ ಭವಿಷ್ಯ'— 5 ದೃಶ್ಯಗಳ ಸಂಗೀತ ಏಕಾಂಕ ನಾಟಕ. (ಕಥಾವಸ್ತು 'ಬುನಾದಿ ತತ್ವ')

5) 'ಸನಾನ ಸಮಾಜ' — (ಎರಡು ದೃಶ್ಯಗಳ ಸಾಮಾಜಿಕ ದೊಡ್ಡ ಏಕಾಂಕ ನಾಟಕ)

6) 'ಚಂದ್ರಹಾಸ' — ಪ್ರಸಿದ್ಧ ಪೌರಾಣಿಕ ಸಂಗೀತ ನಾಟಕ. (ರಚನೆಯಲ್ಲಿ ತುಂಬಾ ನಾವಿನ್ಯವಿದೆ)

7) 'ಮಹಾಕವಿ ಭಾರವಿ' — ಪ್ರಸಿದ್ಧ ಐತಿಹಾಸಿಕ ಸಂಗೀತ ನಾಟಕ. ಸಂಸ್ಕೃತ ಕವಿಯೋರ್ವನ ಚರಿತ್ರೆಯು ನ್ನೊಳಗೊಂಡ ಉತ್ತಮ ರಚನೆ)

8) 'ಸುಧಾರಿತ ಸಮಾಜ' — ಪ್ರಸಿದ್ಧ ಪತ್ತೆದಾರಿ ನಾಟಕ. (ಸೌದಾಮಿನಿ ಕತೆಯ ಆಧಾರದಿಂದ. (ಸಾಮಾಜಿಕ ನೀತಿಯಿಂದೊಡಗೂಡಿದೆ)

9) ಶೈಕ್ಷಣಿಕ ಮೌಲ್ಯದ, ಹಾಗೂ ಕನ್ನಡ ಭಾಷೆ ಮತ್ತು ಸಾಹಿತ್ಯದ ಕುರಿತಾದ ಕೆಲವು ವಿಚಾರಪೂರ್ಣ ಲೇಖನಗಳು. (ಹಲವು ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟವಾಗಿವೆ.)

## INSPECTION REPORT 1957-58.

Sri K. Padmanabha Acharya fully qualified, Talented teacher and a auther in Kannada is reported to be equally at home in Hindi and Music also a versatile man. He may contribute and write completed books for publication. He is reported capable of writing on Higher subjects and contributes to Kannada Litarature.

D. D. P. I. Mysore Division.